ಕನ್ನಡ ಸಾಹಿತ್ಯಕ್ಕೆ ಒಂದು ಅಮೂಲ್ಯವಾದ ಕಾಣಿಕೆ !

# ಪವಿತ್ರ ಕುರ್‌ಆನದ ಕನ್ನಡ ಭಾಷಾಂತರ

## ಗದ್ಯ ಮತ್ತು ಪದ್ಯದಲ್ಲಿ

(ಅನುವಾದಕರು:—ಡಾ. ಎಮ್. ಎನ್. ಶೇಖ, ಕೆ. ಟಿ. ಜಿ. [ ದಿಲ್ಲಿ ],
ಹುಬ್ಬ

.............

ಜಗತ್ತಿನ ಮಹಾ ಶ್ರೇಷ್ಠ ಗ್ರಂಥಗಳಲ್ಲಿ ಒಂದಾದ ಪವಿತ್ರ ಕುರ್‌ಆ಼ ಗ್ರಂಥವನ್ನು, ಹುಬ್ಬಳ್ಳಿಯ ಡಾ. ಎಮ್. ಎನ್. ಶೇಖ ಇವರು, ಕನ್ನ ಭಾಷೆಯಲ್ಲಿ ಭಾಷಾಂತರಿಸುತ್ತಲಿದ್ದಾರೆ. ಕುರಾನದ ಮೊದಲನೇ ಭಾ (ಪಾರಯಿ-ಅಲಮ್) ಮತ್ತು ಮೂವತ್ತನೇ ಭಾಗವು (ಪಾರಯಿ–ಅಮ್)ಃ ರಡೂ ಸದ್ಯಕ್ಕೆ ಸಂಪೂರ್ಣವಾಗಿದ್ದು, ಬೇಗನೇ ಪ್ರಕಟವಾಗಲಿವೆ.

ಕುರ್‌ಆನ್ ಗ್ರಂಥದ ಅರ್ಥ ಮತ್ತು ಭಾವನೆಗಳಲ್ಲಿ ಯಾವದೇ ತ಼ ವ್ಯತ್ಯಾಸವಾಗದಂತೆ, ಅರಬೀ ಭಾಷೆಯಲ್ಲಿರುವ ವಿಷಯಗಳನ್ನು ಇದ್ದ ದ್ದಂತೆಯೇ ಸರಳವಾದ ಶೈಲಿಯಲ್ಲಿ ಕನ್ನಡ ಭಾಷೆಗೆ ರೂಪಾಂತರಿಸಲಾಗಿ ಪ್ರತಿ ಆಯತ್‌ವನ್ನು (ಮಂತ್ರವನ್ನು) ಅತ್ಯಂತ ತಿಳಿಯಾದ ಭಾಷೆಯ಼ ಪದ್ಯರೂಪವಾಗಿ ಭಾಷಾಂತರಿಸಿ, ಭಾಷಾಂತರದ ಕೆಳಗೆ ಅದರ ಅನುವಾ ವನ್ನು ಗದ್ಯದಲ್ಲಿ ಸವಿಸ್ತಾರವಾಗಿ ಬರೆಯಲಾಗಿದೆ.

ಮೇಲೆ ಬರೆದ ಎರಡೂ ಭಾಗಗಳು ಬೇಗನೆ ಅಚ್ಚಿನ ಮನೆಯಿಂ಼ ಹೊರಬೀಳಲಿವೆ. ಎರಡೂ ಭಾಗಗಳಿಗೆ ಕೂಡಿ ಎರಡು ರೂಪಾಯಿ ಕಿಮ್ಮತ್ತ಼ ಇಡಲಾಗಿದೆ. ಅಭಿರುಚಿಯುಳ್ಳವರು ತಮ್ಮ ಪ್ರತಿಗಳಿಗಾಗಿ ಮುಂಚಿತವಾ಼ ಬರೆದುಕೊಳ್ಳಬೇಕು.

ಡಾ. ಎಮ್. ಎನ್. ಶೇಖ
ಪಗಡಿಗಲ್ಲಿ, ಹುಬ್ಬಳ್ಳಿ.

786

# ಇಸ್ಲಾಮ್ ಧರ್ಮದ ಕೈಗನ್ನಡಿ



“ಸುಬ್ಹಾನಕ ಲಾ ಇಲ್ಮ ಲನಾ ಇಲ್ಲಾ ಮಾ ಅಲ್ಲಮ್ತನಾ
ಇನ್ನಕ ಅಂತಲ್ ಅಲೀಮುಲ್ ಹಕೀಮ್”

—ಕುರ್‌ಆನ್.

[ ಅನುವಾದ ]

ನೀನಹುದು ದೇವಾ ಪರಮ ಪಾವನನು ಜ್ಞಾನನಿಧಿ ನಮಗೆ ಅವರಾರು |
ನೀ ತಿಳಿಸಿದಷ್ಟನ್ನು ಬಲ್ಲೆವು ಮಾತ್ರ, ಗೊತ್ತಾಗದೆಮಗೆ ಉಳಿದುದಾವುದೂ |
ನೀನಹುದು ಸರ್ವಜ್ಞನಿಹ ಯೋಗ್ಯಾಯೋಗ್ಯ ವಿಮರ್ಶಕ ಜನನಾಥ ||

ಲೇಖಕರು:
ಡಾ. ಎಮ್. ಎನ್. ಶೇಖ

೧೯೫೩ ] [ ಬೆಲೆ: ೧-೪-೦

ಪ್ರಕಾಶಕರು:
ಡಾ. ಎಮ್. ಎನ್. ಶೇಖ,
K.T.J. (Delhi),
ಪಗಡಿಗಲ್ಲಿ, ಹುಬ್ಬಳ್ಳಿ.



( ಮೊದಲನೆ ಮುದ್ರಣ—೧೦೦೦ ಪ್ರತಿಗಳು )



ಮುದ್ರಕರು :
ಎಸ್. ಎಫ್. ಕಟ್ಟೀಮನಿ
ಮನೋಹರ ಮುದ್ರಣಾಲಯ,
ಹುಬ್ಬಳ್ಳಿ.

## ಸಮರ್ಪಣೆ —

ಅಂಧಃಕಾರಮಯವಾದ ನನ್ನ ಮನೋಮಂದಿರದಲ್ಲಿ ಇಸ್ಲಾಮ್-ಜ್ಯೋತಿಯನ್ನು ಮೊದಲು ಬಾರಿ ಬೆಳಗಿಸಿದ ನನ್ನ ಪರಮ ಪೂಜ್ಯ ಗುರುಗಳಾದ ಹ|| ಮೌಲಾನಾ ಕುತುಬುದ್ದೀನ್ ಅಹ್ಮದ್ ಸಾಹೇಬ ಬೆಲ್ಗಾಮೀ [ಮರ್ಹೂಮ್] ಇವರ ಆತ್ಮಕ್ಕೆ

— ಎಮ್. ಎನ್. ಶೇಖ

## — ಕೃತಜ್ಞತೆಗಳು —

ಈ ಗ್ರಂಥವನ್ನು ಬರೆದು ಮುಗಿಸಲು ನನಗೆ ಉತ್ತೇಜನವನ್ನಿತ್ತು ಇದರ ಪ್ರಕಟನೆಗಾಗಿ ಸರ್ವವಿಧ ಸಹಾಯವನ್ನು ನೀಡಿದ್ದಕ್ಕಾಗಿ, ನನ್ನ ಹಿರಿಯರೂ ಆತ್ಮೀಯರೂ ಆದ ಜನಾಬ ಮೀರಾ ಸಾಹೇಬ ಎನ್. ನದಾಫ (ನಕ್ಶಾಳಕರ) ಹುಕ್ಕೇರಿ, ಇವರಿಗೆ ನಾನು ಅತ್ಯಂತ ಋಣಿಯಾಗಿದ್ದೇನೆ. ಗ್ರಂಥವನ್ನೋದಿ ತಮ್ಮ ಮೆಚ್ಚುಗೆಗಳನ್ನು ವ್ಯಕ್ತಪಡಿಸಿದಂಥ ನನ್ನ ಎಲ್ಲ ಮಿತ್ರರಿಗೂ ಹಿರಿಯರಿಗೂ ಸಹ ಕೃತಜ್ಞನಾಗಿದ್ದೇನೆ. ಈ ಗ್ರಂಥದ ಬರಹದ ಬಗ್ಗೆ ಯೋಗ್ಯ ಸೂಚನೆಗಳನ್ನಿತ್ತು ಇದನ್ನು ಸುಂದರವಾಗಿ ಮುದ್ರಿಸಿ ಕೊಟ್ಟಿದ್ದಕ್ಕಾಗಿ, ಹುಬ್ಬಳ್ಳಿಯ ಮನೋಹರ ಮುದ್ರಣಾಲಯದ ಒಡೆಯರಾದ ಶ್ರೀ. ಎಸ್. ಎಫ್. ಕಟ್ಟೀಮನಿ ಇವರಿಗೂ ನಾನು ತುಂಬಾ ಆಭಾರಿಯಾಗಿ

ಹುಬ್ಬಳ್ಳಿ
ತಾ|| ೨೦-೧೧-೫೩

ಕೃಪಾಭಿಲಾಷಿ,
ಎಮ್. ಎನ್. ಶೇಖ

# — ವಿಜ್ಞಾಪನೆ —

ಇಸ್ಲಾಮ್ ಧರ್ಮದ ಸಾಹಿತ್ಯವೆಲ್ಲವೂ ಅರಬೀ ಮತ್ತು ಉರ್ದು ಭಾಷೆಗಳಲ್ಲಿ ಇದೆಯಾದ್ದರಿಂದ, ಉರ್ದು ಭಾಷೆಯು ಬಾರದಲ್ಲಿ, ಇಸ್ಲಾಮ್ ಧರ್ಮದ ಪರಿಚಯ ಮಾಡಿಕೊಳ್ಳುವದು ಮತ್ತು ಇಸ್ಲಾಮ್ ಧರ್ಮದ ನೇಮಗಳನ್ನು ಚನ್ನಾಗಿ ತಿಳಿದುಕೊಳ್ಳುವದು ಸಾಧ್ಯವಿಲ್ಲ. ಕರ್ನಾಟಕದಲ್ಲಿ ಸುಮಾರು ಹದಿನಾರು ಲಕ್ಷ ಮುಸ್ಲಿಮರಿದ್ದು, ಇವರಲ್ಲಿಯ ಲಕ್ಷಾವಧಿ ಜನರಿಗೆ ಉರ್ದು ಭಾಷೆಯು ಓದು ಬರೆಯಲು ಬರುವದಿಲ್ಲ. ಕೆಲವರಿಗಂತೂ ಕಿಂಚಿತವೂ ತಿಳಿಯುವದಿಲ್ಲ. ಇಸ್ಲಾಮ್ ಧರ್ಮದ ನೇಮಗಳನ್ನು ಸವಿಸ್ತಾರವಾಗಿ ತಿಳಿಸುವಂಥ ಗ್ರಂಥಗಳು ಕನ್ನಡ ಭಾಷೆಯಲ್ಲಿ ಇದುವರೆಗೆ ಪ್ರಕಟವಾಗಿಲ್ಲವಾದ್ದರಿಂದ, ಲಕ್ಷಾವಧಿ ಮುಸ್ಲಿಮರಿಗೆ ತಮ್ಮ ಧಾರ್ಮಿಕ ತತ್ವಗಳನ್ನು ತಿಳಿದುಕೊಳ್ಳಲು ಯೋಗ್ಯ ಸಾಧನವೇ ಇಲ್ಲದಂತಾಗಿದೆ. ಈ ಕೊರತೆಯನ್ನು ತುಂಬುವದಕ್ಕಾಗಿಯೇ **"ಇಸ್ಲಾಮ್ ಧರ್ಮದ ಕೈಗನ್ನಡಿ"** ಎಂಬ ಈ ಗ್ರಂಥವನ್ನು ಬರೆದು ಪ್ರಕಟಿಸಿದ್ದೇನೆ. ಮುಸ್ಲಿಮ್ ಬಾಂಧವರು ಈ ಗ್ರಂಥದ ಸದುಪಯೋಗವನ್ನು ಮಾಡಿಕೊಂಡರೆ, ನಾನು ಕೃತಾರ್ಥನಾದಂತೆಯಾಗುವದು. ಅಲ್ಲದೆ, ಇಸ್ಲಾಮ್ ಧರ್ಮದ ಪರಿಚಯವನ್ನು ಪಡೆಯಬೇಕೆಂದು ಇಚ್ಛಿಸುವ ಮುಸಲ್ಮಾನೇತರ ಬಂಧುಗಳು ಸಹ ಈ ಗ್ರಂಥವನ್ನು ಅವಶ್ಯವಾಗಿ ಓದಿ, ತಮ್ಮ ಜ್ಞಾನ ಭಾಂಡಾರವನ್ನು ಬೆಳೆಸಿಕೊಳ್ಳುವರೆಂದು ನನಗೆ ಆಶೆಯಿದೆ.

ಸಾಮಾನ್ಯರಿಗೂ ಸಹ ತಿಳಿಯಲೆಂಬ ಉದ್ದೇಶದಿಂದ ಈ ಗ್ರಂಥವನ್ನು ಪ್ರಶ್ನೋತ್ತರಗಳ ರೂಪದಲ್ಲಿ ಬರೆಯಲಾಗಿದೆ. ಇದರಲ್ಲಿ ತಪ್ಪು ತಡೆಗಳೇನಾದರೂ ಇದ್ದರೆ, ವಾಚಕ ಮಹಾಶಯರು ಅವುಗಳನ್ನು ಎತ್ತಿ ನನಗೆ ತೋರಿಸಿದರೆ, ಅತ್ಯಂತ ಕೃತಜ್ಞತೆಯಿಂದ ಸ್ವೀಕರಿಸುವೆನು.

ಹುಬ್ಬಳ್ಳಿ.
ತಾ|| ೨೦-೧೧-೫೩.

ಕೃಪಾಭಿಲಾಷಿ,
ಎಮ್. ಎನ್. ಶೇಖ

# ವಿಷಯ ಸೂಚಿ

## ೧ನೇ ಭಾಗ

### ಇಸ್ಲಾಮ ಧರ್ಮದ ಸಾಮಾನ್ಯ ಪರಿಚಯ


| | ವಿಷಯ | | ಪುಟ |
|---|---|---|---|
| ೧ | ಮುಸ್ಲಿಮ್ ಮತ್ತು ಇಸ್ಲಾಮ್ | .... | ೧ |
| ೨ | ಹಜರತ ಮುಹಮ್ಮದ ಪೈಗಂಬರರು | .... | ೫ |
| ೩ | ಕುರಾನ | .... | ೯ |
| ೪ | ಈಮಾನ | .... | ೧೨ |


## ೨ನೇ ಭಾಗ

### ಇಸ್ಲಾಮ ಧರ್ಮದ ಪಂಚ-ಸ್ತಂಭಗಳು


| | | | |
|---|---|---|---|
| ೧ | ಕಲ್ಮಾ | .... | ೨೦ |
| ೨ | ನಮಾಜ:- | | |
| (೧) | ನಮಾಜದ ಸಾಮಾನ್ಯ ಮಾಹಿತಿ | .... | ೨೩-೪೦ |
| (೨) | ನಮಾಜದಲ್ಲಿಯ ಪಠಣೆಗಳು | .... | ೪೧-೪೬ |
| (೩) | ವಜೂ | .... | ೪೬ |
| (೪) | ತಯಮ್ಮುಮ್ | .... | ೪೮ |
| (೫) | ಇಸ್ತಿಂಜಾ | .... | ೪೯ |
| (೬) | ಗುಸ್ಲ | .... | ೫೦ |
| (೭) | ಅಜಾನ | .... | ೫೩ |
| (೮) | ಅಕಾಮತ್ | .... | ೫೫ |
| (೯) | ನಮಾಜ ಮಾಡುವ ಪದ್ಧತಿ | .... | ೫೬ |
| (೧೦) | ನಮಾಜೆ-ಜನಾಜ್ಯಾದ ಪದ್ಧತಿ | .... | ೬೫ |
| (೧೧) | ನಮಾಜೆ-ಈದೈನಗಳ ಪದ್ಧತಿ | .... | ೬೬ |
| (೧೨) | ತರಾವೀಹ್ ನಮಾಜದ ಪದ್ಧತಿ | .... | ೬೮ |
| (೧೩) | ವಿತ್ರ ನಮಾಜದ ಪದ್ಧತಿ | .... | ೭೨ |
| (೧೪) | ತಹಜ್ಜುದ್, ಅಷೂರಾ, ಇಶ್ರಾಕ್, ಷುಕ್ರಾನಾ, | | |

ಅಸ್ತಘ್ಫಾರ್; ಜನಾಜಾ ಮತ್ತು ಕಜಾ ನಮಾಜ
ಗಳ ವಿವರಣೆ ೭೩-೭೬
(೧೫) ಹೆಂಗಸರು ನಮಾಜ ಮಾಡುವ ಪದ್ಧತಿ .... ೭೬
(೧೬) ರೋಗಿಗಳು ನಮಾಜ ಮಾಡುವ ಪದ್ಧತಿ .... ೭೮
೩ ರೋಜಾ .... ೭೯
ಫಿತ್ರಾ .... ೮೨
೪ ಜಕಾತ್ .... ೮೩
೫ ಹಜ್ .... ೮೬

## ೩ನೇ ಭಾಗ

### ಮುಸ್ಲಿಮರ ಇತರ ಧಾರ್ಮಿಕ ವಿಧಿಗಳು

೧ ಫಾತಿಹಾ ಓದಿಸುವ ಪದ್ಧತಿ .... ೮೬
೨ - ಜುಬ್ಹಾ .... ೮೯
೩ ಕುರ್ಬಾನಿ .... ೯೫
೪ ಬಾಂಗ ಮತ್ತು ೫ ಅಕೀಕಾ .... ೯೯
೬ ಖತನಾ .... ೧೦೦
೭ ಷುಕ್ರಾನಾ .... ೧೦೧
೮ ನಿಕಾಹ್ .... ೧೦೩
ತಲ್ಲಾಕ್ .... ೧೧೩
೯ ಖುಲಅ ಮತ್ತು ೧೦ ಇದ್ದತ್ .... ೧೧೪
೧೧ ಇಯ್ಯಾದತ್ .... ೧೧೫
೧೨ ಕಫನ-ದಫನ:—
(೧) ಕಫನ್ ವಿಧಿ .... ೧೧೭
(೨) ದಫನ್ ವಿಧಿ .... ೧೨೩
(೩) ನಮಾಜೆ-ಜನಾಜಾ .... ೧೨೪
೧೩ ಜಿಯಾರತ್ .... ೧೨೮

## ೪ನೇ ಭಾಗ

ಕುರಾನದಲ್ಲಿಯ ಅಧ್ಯಾಯಗಳು ೧೩೧

# --ಒಪ್ಪೋಲೆ--

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೭ | ೧೬ | ಅಪರಾರೆಂದರೆ | ಅವರಾರೆಂದರೆ |
| ೨೯ | ೯ | ಸಮಾಜೆ-ಇಷಾವ | ನಮಾಜೆ-ಇಷಾದ |
| ೩೮ | ೮ | ಕಕಾಅತ್ತೈನಿ | ರಕಾಅತ್ತೈನಿ |
| ೩೮ | ೧೯ | ವಸ್ಸೈತು | ನಸ್ಸೈತು |
| ೩೯ | ೪ | ಪಾಜಿಬ್ | ವಾಜಿಬ್ |
| ೪೧ | ೨೧ | ವಂಗಳಕರವಾಗಿದೆ | ಮಂಗಳಕರವಾಗಿದೆ |
| ೪೩ | ೩ | ಇಬ್ರಾಹೀಮಿ್ | ಇಬ್ರಾಹೀಮ್ |
| ೪೫ | ೧ | ಬಿಕಿ | ಬಿಕೆ |
| ೬೭ | ೫ | ಕೈಗ್ನಳನ್ನು | ಕೈಗಳನ್ನು |
| ೭೦ | ೧ | ಮುಹಮುದನಿಲ್ | ಮುಹಮ್ಮದನಿಲ್ |
| ೭೨ | ೧೦ | ಮುಲಿಕಿಲ್-ಕ್ಕುದ್ದೂಸ್ | ಮುಲಿಕಿಲ್-ಕುದ್ದೂಸ್ |
| ೭೬ | ೩ | ಅಧ್ಯಾಯಳ್ಲಿದ್ದ | ಅಧ್ಯಾಯದಲ್ಲಿ |
| ೮೮ | ೨ | ವಕೌನಲ್ಲಾಹು | ನಕೌನಲ್ಲಾಹು |
| ೮೮ | ೩ | ಇನ್ನಲ್ಲಾಫಹಾ | ಇನ್ನಲ್ಲಾಹಾ |
| ೯೦ | ೨೦ | ನೂನವನು | ಮಾನವನು |
| ೯೨ | ೧೩ | ನಜತ್ವವು | ನಿಜತ್ವವು |
| ೯೫ | ೨೧ | ಆಬ್ಞಾನುಸಾರವಾಗಿ | ಆಜ್ಞಾನುಸಾರವಾಗಿ |
| ೯೯ | ೧೯ | ದಿಪಸ | ದಿವಸ |
| ೧೧೯ | ೪ | ಅರಿಗಳು | ಅರಿವೆಗಳು |
| ೧೧೯ | ೨೩ | ಉಪಯೋಗಿಸುದ | ಉಪಯೋಗಿಸುವ |
| ೧೨೭ | ೬ | ಅನ್ನತ್ರ | ಅನ್ನುತ್ರ |
| ೧೨೭ | ೨೫ | ವ ಮಿನಲ್ಲಾ- | ವ ಮಿನಷ್ಟಿ- |
| ೧೨೯ | ೧೧ | ಯಗ್ಫಿರುಲಾಹು | ಯಗ್ಫಿರುಲ್ಲಾಹು |

## ಓದುಗರಲ್ಲಿ ಅರಿಕೆ



ಪವಿತ್ರ ಕುರಾನದ ವಾಕ್ಯಗಳುಳ್ಳ ಈ ಗ್ರಂಥವನ್ನು ಸೌಜನ್ಯದಿಂದ ಉಪಯೋಗಿಸಬೇಕು.




# ಇಸ್ಲಾಮ್ ಧರ್ಮದ ಕೈಗನ್ನಡಿ

ಬಿಸ್ಮಿಲ್ಲಾಹಿರ್ರಹಿಮಾನಿರ್ರಹೀಮ್
ನಹಮ್ದುಹು ವ ನಸೊಲ್ಲಿ ಅಲಾ ರಸೂಲಿಲ್ ಕರೀಮ್

[ ಗುರು ಶಿಷ್ಯರು ಮಸೀದಿಯಲ್ಲಿ ಕುಳಿತಿದ್ದಾರೆ. ಅವರಿಬ್ಬರಲ್ಲಿ ಪ್ರಶ್ನೋತ್ತರಗಳು ನಡೆದಿವೆ. ]

## ೧ನೆಯ ಭಾಗ

## ಇಸ್ಲಾಮ್ ಧರ್ಮದ ಸಾಮಾನ್ಯ ಪರಿಚಯ

### (೧) ಮುಸ್ಲಿಮ್ ಮತ್ತು ಇಸ್ಲಾಮ್

ಶಿಷ್ಯ:- ಗುರುವರ್ಯ, ಈ ಭೂಮ್ಯಾಕಾಶಗಳನ್ನೂ, ಭೂಮ್ಯಾಕಾಶಗಳಲ್ಲಿರುವ ಸಕಲ ವಸ್ತುಗಳನ್ನೂ ಯಾರು ಹುಟ್ಟಿಸಿದ್ದಾರೆ?

ಗುರು:- ಮಗು, ಈ ಎಲ್ಲ ಬ್ರಹ್ಮಾಂಡವನ್ನು ಅಂದರೆ ಸೂರ್ಯ, ಚಂದ್ರ, ಪೃಥ್ವಿಯಾದಿ ಮಂಡಲಗಳನ್ನೂ ಭೂಮ್ಯಾಕಾಶಗಳಲ್ಲಿರುವ ಸಕಲ ವಸ್ತುಗಳನ್ನೂ ಪರಮಾತ್ಮನು ಹುಟ್ಟಿಸಿದ್ದಾನೆ.

ಶಿಷ್ಯ:- ಈ ಬ್ರಹ್ಮಾಂಡವನ್ನು ಪರಮಾತ್ಮನು ಯಾವ ವಸ್ತುವಿನಿಂದ ಮತ್ತು ಯಾವ ರೀತಿಯಾಗಿ ಹುಟ್ಟಿಸಿದನು?

ಗುರು:- ಈ ಬ್ರಹ್ಮಾಂಡವನ್ನು ಪರಮಾತ್ಮನು ಶೂನ್ಯದಿಂದ ನಿರ್ಮಿಸಿದನು; ಪರಮಾತ್ಮನು ಈ ಬ್ರಹ್ಮಾಂಡವನ್ನು ನಿರ್ಮಿಸುವದಕ್ಕಿಂತ ಮೊದಲು ಯಾವ ವಸ್ತುವೂ ಇದ್ದಿಲ್ಲ; ಏನೂ ಇಲ್ಲದಲೆ, ಎಲ್ಲವನ್ನೂ ತನ್ನ ಇಚ್ಛಾ ಶಕ್ತಿಯಿಂದಲೇ ನಿರ್ಮಿಸಿದ್ದಾನೆ. ಅವನು ಎಂಥವನೆಂಬುದು ನಿನಗೆ ಗೊತ್ತಿದೆಯೋ ? ಎಂಥವನೆಂದರೆ, ಯಾವದಾದರೊಂದು ವಸ್ತುವನ್ನು ಅವನು ನಿರ್ಮಿಸಬಯಸಿದರೆ ಅಥವಾ ಯಾವದಾದರೊಂದು ಕೆಲಸವನ್ನು ಮಾಡಬಯಿಸಿದರೆ, ಆ ಬಗ್ಗೆ ಆತನು ಬಾಯಿಂದ "ಹಾಗೆ" ಉಚ್ಚರಿಸಿದ ಕ್ಷಣವಲ್ಲಿಯೆ ಆ ವಸ್ತುವು ನಿರ್ಮಿತವಾಗುವದು; ಅಥವಾ ಆ ಕೆಲಸವು ಪೂರ್ಣವಾಗುವದು. ತನ್ನ ಆ ಇಚ್ಛಾ ಶಕ್ತಿಯಿಂದಲೇ ಪರಮಾತ್ಮನು ಬ್ರಹ್ಮಾಂಡವನ್ನೆಲ್ಲ ನಿರ್ಮಿಸಿದ್ದಾನೆ. ತಿಳಿಯಿತೇ ?

ಶಿಷ್ಯ:- ಮಾನವರಾದ ನಮ್ಮೆಲ್ಲರನ್ನು ಸಹ ಪರಮಾತ್ಮನೇ ಹುಟ್ಟಿಸಿರುವನೇನು ?

ಗುರು:- ಅಹುದು. ನಮ್ಮನ್ನೂ, ನಮಗಿಂತ ಪೂರ್ವದಲ್ಲಿ ಆಗಿ ಹೋದಂಥ ನಮ್ಮ ಪೂರ್ವಜರೆಲ್ಲರನ್ನೂ ಪರಮಾತ್ಮನೇ ಹುಟ್ಟಿಸಿದ್ದಾನೆ. ಭೂಮ್ಯಾಕಾಶಗಳನ್ನೂ ಭೂಮ್ಯಾಕಾಶದಲ್ಲಿರುವ ಸಕಲ ವಸ್ತುಗಳನ್ನೂ ನಿರ್ಮಿಸಿದ ನಂತರ, ಅವನು ಮಾನವನೆಂಬ ಪ್ರಾಣಿ-ಶ್ರೇಷ್ಠನನ್ನು (ಅಷ್ರಫುಲ್-ಮಖ್ಲೂಖಾತನನ್ನು) ನಿರ್ಮಿಸಿ, ಅವನನ್ನು ತನ್ನ ಪ್ರತಿನಿಧಿಯನ್ನಾಗಿ ಮಾಡಿ ಈ ಭೂಲೋಕದಲ್ಲಿ ಇಟ್ಟನು. ಅದು ಹೇಗೆಂದರೆ, ಒಂದು ಗಂಡು ಮತ್ತು ಒಂದು ಹೆಣ್ಣು ಹೀಗೆ ಎರಡು ಮಣ್ಣಿನ ಮೂರ್ತಿಗಳನ್ನು ನಿರ್ಮಿಸಿ, ಅವುಗಳಲ್ಲಿ ಜೀವ ಕಳೆಯನ್ನು ತುಂಬಿ, ಅವಶ್ಯವಾದ ಜ್ಞಾನವನ್ನು ಅವುಗಳಿಗಿತ್ತು, "ಆದಮ್" ಮತ್ತು "ಹವ್ವಾ" ಎಂದು ಅವುಗಳಿಗೆ ನಾಮಕರಣ ಮಾಡಿ, ಅವರಿಬ್ಬರನ್ನೂ ಭೂಲೋಕಕ್ಕೆ ಕಳುಹಿಸಿ, ಈಗ ಅರಬಸ್ತಾನವೆಂದು ಕರೆಯಲ್ಪಡುವ ಭೂಮಂಡಲದ ಭಾಗದಲ್ಲಿ ಅವರನ್ನಿಟ್ಟನು. ಆದಮ್ ಮತ್ತು ಹವ್ವಾ ಎಂಬ ಆ ದಂಪತಿಗಳಿಂದಲೇ ಮಾನವ ಕುಲದ ಉತ್ಪತ್ತಿಯಾಯಿತು. ಬರಬರುತ್ತ ಮಾನವರ ಸಂಖೆಯು ಬೆಳೆಯುತ್ತ ನಡೆದಂತೆ ಮಾನವರು ಭೂಮಂಡಲದ ಬೇರೆ ಬೇರೆ ಭಾಗಗಳಲ್ಲಿ ಹರಡಿದರು. ದೇಶ, ಕಾಲ, ಪರಿಸ್ಥಿತಿಗೆ ಅನುಗುಣವಾಗಿ ಮಾನವ

ಕುಲದಲ್ಲಿ ನಾನಾ ಜನಾಂಗಗಳಾದವು. ಸದ್ಯಕ್ಕೆ ಆಚಾರ ವಿಚಾರಗಳ ದೃಷ್ಟಿಯಿಂದ ಮಾನವ ಕುಲದಲ್ಲಿ ಬೇರೆ ಬೇರೆ ಜನಾಂಗಗಳಿದ್ದರೂ ಸಹ, ಸಕಲ ಮಾನವರನ್ನು ಹುಟ್ಟಿಸಿದಂಥ, ಸಕಲರಿಗೂ ಒಡೆಯನಾದಂಥ, ಸಕಲರಿಗೂ ಮಾರ್ಗದರ್ಶನವನ್ನೀಯುವಂಥ, ಸಕಲರನ್ನು ಪೋಷಿಸುವಂಥ ಮತ್ತು ಸಕಲರನ್ನೂ ಸಂಹರಿಸುವಂಥ ಪರಮಾತ್ಮನು ಮಾತ್ರ ಒಬ್ಬನೇ ಇದ್ದಾನೆ.

ಶಿಷ್ಯ:- ಸಕಲ ಮಾನವರಿಗೆಲ್ಲ ತನ್ನ ಪ್ರವಾದಿಗಳ ಮುಖಾಂತರವಾಗಿ ಪರಮಾತ್ಮನೇ ಮಾರ್ಗದರ್ಶನ ಮಾಡುತ್ತ ಬಂದಿದ್ದಾನಲ್ಲವೇ? ಅಂದಮೇಲೆ ಬೇರೆ ಬೇರೆ ಜನಾಂಗದವರ ಆಚಾರ ವಿಚಾರಗಳಲ್ಲಿ ಅರ್ಥಾತ್ ಧರ್ಮಗಳಲ್ಲಿ ಭಿನ್ನತೆಗಳು ಏಕೆ ಕಂಡು ಬರುವವು?

ಗುರು:— ಯಾಕೆಂದರೆ, ಬೇರೆ ಬೇರೆ ದೇಶದವರಿಗಾಗಿ ಬೇರೆ ಬೇರೆ ಕಾಲದಲ್ಲಿ ಅವರಿಗೆ ಉಚಿತವಾದ ರೀತಿಗಳಲ್ಲಿ ಪರಮಾತ್ಮನು ಮಾರ್ಗ ದರ್ಶನ ಮಾಡುತ್ತ ಬಂದಿರುವನಾದ್ದರಿಂದ, ಬೇರೆ ಬೇರೆ ಜನಾಂಗದವರ ಆಚಾರ ವಿಚಾರಗಳಲ್ಲಿ, ತೋರಿಕೆಯ ಭಿನ್ನತೆಗಳು ಕಂಡು ಬರುವವು. ಆದರೆ ಎಲ್ಲ ಧರ್ಮಗಳ-ತಿರುಳು ಮಾತ್ರ ಒಂದೇ ಇರುತ್ತದೆ. ಇರಲಿ! ಈ ವಿಷಯವು ನಿನಗೆ ನಂತರ ಗೊತ್ತಾಗುವದು. ಆದರೆ, ನೀನಾರೆಂಬುದನ್ನೂ ನಿನ್ನ ಕರ್ತವ್ಯಗಳು ಆವವೆಂಬುದನ್ನೂ ಮೊದಲು ತಿಳಿದುಕೋ. ನೀನು ಯಾರೆಂಬುದು ನಿನಗೆ ಗೊತ್ತಿದೆಯೋ? ಅಂದರೆ, ಧರ್ಮದ ನಾತೆಯಿಂದ ನಿನಗೆ ಏನೆನ್ನುತ್ತಾರೆ?

ಶಿಷ್ಯ:— ಗುರುವರ್ಯ, ಧರ್ಮದ ನಾತೆಯಿಂದ ನನಗೆ 'ಮುಸ್ಲಿಮ್' ಅಥವಾ 'ಮುಸಲ್ಮಾನ್' ಅನ್ನುತ್ತಾರೆ.

ಗುರು:— 'ಮುಸ್ಲಿಮ್' ಅಂದರೆ ಏನು?

ಶಿಷ್ಯ:— ಮುಸ್ಲಿಮ್ ಅಂದರೆ, ಪರಮಾತ್ಮನ ಆಜ್ಞಾಧಾರಕನು, ಅಥವಾ ಪರಮಾತ್ಮನಿಗೆ ವಿಧೇಯನಾದವನು ಅಥವಾ ಪರಮಾತ್ಮನ ಆಜ್ಞೆಯಂತೆ ನಡೆಯುವವನು, ಅಂದರೆ, ,ಪರಮಾತ್ಮನು ತನ್ನ ಪ್ರವಾದಿಯ ಮುಖಾಂತರ ಪ್ರಕಟ ಪಡಿಸಿದಂಥ ಸತ್ಯಧರ್ಮದ ಅನುಯಾಯಿ.

ಗುರುಃ— 'ಮುಸಲ್ಮಾನ್' ಶಬ್ದದ ಅರ್ಥವೇನು?

ಶಿಷ್ಯಃ— 'ಮುಸಲ್ಮಾನ್' ಇದು ಫಾರ್ಸಿ ಶಬ್ದವು. 'ಮುಸ್ಲಿಮ್' ಎಂಬ ಅರಬೀ ಶಬ್ದದಿಂದ ಇದು ಹುಟ್ಟಿರುತ್ತದೆ. "ಮುಸಲ್ಮಾನ್" ಅಂದರೆ, ಇಸ್ಲಾಮ್ ಧರ್ಮದಂತೆ ನಡೆಯುವವನು. 'ಮುಸ್ಲಿಮ್' 'ಮುಸಲ್ಮಾನ್' 'ಮುಸ್ಲಿಮೀನ್' ಮತ್ತು 'ಇಸ್ಲಾಮ್' ಈ ನಾಲ್ಕೂ ಶಬ್ದಗಳು ಅರಬೀ ಭಾಷೆಯ - 'ಸಲಾಮ್' ಎಂಬ ಕ್ರಿಯಾಪದದಿಂದ ಉತ್ಪತ್ತಿಯಾಗಿವೆ. 'ಸಲಾಮ್' ಅಂದರೆ, ವಿಧೇಯನಾಗು ಅಥವಾ ಪರಮಾತ್ಮನ ಮುಂದೆ ತಲೆಬಾಗು.

ಗುರು:— ಮುಸಲ್ಮಾನರ ಧರ್ಮಕ್ಕೆ ಏನೆನ್ನುತ್ತಾರೆ.

ಶಿಷ್ಯ:— ಮುಸಲ್ಮಾನರ ಧರ್ಮಕ್ಕೆ 'ಇಸ್ಲಾಮ್' ಅನ್ನುತ್ತಾರೆ.

ಗುರು:— 'ಇಸ್ಲಾಮ್' ದ ಅರ್ಥವೇನು?

ಶಿಷ್ಯ:— ಇಸ್ಲಾಮ್ ಅಂದರೆ, ಶಾಂತಿಯ ಮಾರ್ಗ ಅಥವಾ ಪರಮಾತ್ಮನ ಇಚ್ಛೆಗೆ ಆಧೀನವಾಗುವಿಕೆ.

ಗುರು:— ಶಾಬಾಶ್! ನಿನ್ನ ಉತ್ತರಗಳಿಂದ ಸಂತುಷ್ಟನಾದೆ. ಇಸ್ಲಾಮ್ ಧರ್ಮದ ವಿಷಯವಾಗಿ ಬೇಕಾದ್ದನ್ನು ಕೇಳು; ಉತ್ತರಿಸುವೆನು.

ಶಿಷ್ಯ:— ಇಸ್ಲಾಮ್ ಧರ್ಮವು ಏನು ಕಲಿಸುತ್ತದೆ?

ಗುರು:— ಪರಮಾತ್ಮನು ಒಬ್ಬನೇ ಇರುವನೆಂದೂ, ಪ್ರಾರ್ಥನೆಗೆ ಅಥವಾ ಪೂಜೆಗೆ ಆತನೊಬ್ಬನೇ ಅರ್ಹನಾಗಿದ್ದಾನೆಯಾದ್ದರಿಂದ ಆತನ ಹೊರ್ತಾಗಿ ಮತ್ತಾರನ್ನೂ ಪೂಜಿಸಬಾರದೆಂದೂ ಹ|| ಮುಹಮ್ಮದ ಪೈಗಂಬರರು ದೇವ-ಭಕ್ತಾಗ್ರಣಿ ಮತ್ತು ದೇವ-ಪ್ರವಾದಿ ಇರುವರೆಂದೂ, ಎಲ್ಲ ಪ್ರವಾದಿಗಳನ್ನು ಪರಮಾತ್ಮನೇ ಕಳಿಸಿರುವನಾದ್ದರಿಂದ ಎಲ್ಲ ಪ್ರವಾದಿಗಳಲ್ಲಿ ಮತ್ತು ಅವರ ಉಪದೇಶಗಳಲ್ಲಿ ಶ್ರದ್ಧೆಗಳನ್ನಿಡಬೇಕೆಂದೂ ಇಸ್ಲಾಮ್ ಧರ್ಮವು ಕಲಿಸುವದು; ಮತ್ತು ಮಾನವರಿಗೆಲ್ಲ ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ಇಹಪರಗಳ ಸುಖದ ಮಾರ್ಗವನ್ನು ತೋರಿಸುವದು.

ಶಿಷ್ಯ:— ಇಸ್ಲಾಮ್ ಧರ್ಮವನ್ನು ಯಾರು ಸ್ಥಾಪಿಸಿದರು?

ಗುರು:— ಇಸ್ಲಾಮ್ ಧರ್ಮವನ್ನು ಇಂಥವರೇ ಸ್ಥಾಪಿಸಿದ್ದಾರೆ ಎಂದು ಹೇಳಲು ಬರುವದಿಲ್ಲ. ಯಾಕೆಂದರೆ, ಇಸ್ಲಾಮ್ ಧರ್ಮವು ಮಾನವ-ನಿರ್ಮಿತವಾದ ಧರ್ಮವಲ್ಲ. ಜಗತ್ತಿನ ಆದಿಕಾಲದಿಂದಲೂ ಮಾನವನಿಗೆ ಮಾರ್ಗದರ್ಶನ ಮಾಡುತ್ತ ಬಂದ ಧರ್ಮವಿದು. ಕಾಲಕಾಲಕ್ಕೆ ತನ್ನ ಪ್ರವಾದಿಗಳನ್ನು ಕಳುಹಿಸಿ, ಪ್ರವಾದಿಗಳ ಮುಖಾಂತರವಾಗಿ ಪರಮಾತ್ಮನೇ ಈ ಧರ್ಮವನ್ನು ಬೆಳೆಸುತ್ತ ಬಂದಿದ್ದಾನೆ. ಹಜರತ್ ಇಬ್ರಾಹೀಮ್, ಹ|| ಇಸ್ಮಾಯೀಲ್, ಹ|| ಯಾಕೂಬ, ಹ|| ದಾವೂದ್, ಹ|| ಮೂಸಾ, ಹ|| ಈಸಾ ಮೊದಲಾದ ದೇವ–ಪ್ರವಾದಿಗಳೆಲ್ಲರೂ ಇಸ್ಲಾಮ್ ಧರ್ಮವನ್ನೇ ಬೋಧಿಸಿರುತ್ತಾರೆ. ಕಡೆಯ ದೇವ–ಪ್ರವಾದಿಗಳಾದ ಹಜರತ್ ಮಹಮ್ಮದ ಪೈಗಂಬರರು ಪರಮಾತ್ಮನ ಆಜ್ಞೆಯಂತೆ ಈ ಧರ್ಮವನ್ನು ಪರಿಪೂರ್ಣಗೊಳಿಸಿ, ಮಾನವರ ಇಹಪರ ಮಾರ್ಗದರ್ಶನಕ್ಕಾಗಿ ಒಂದು ಅಚ್ಚುಕಟ್ಟಾದ ಧಾರ್ಮಿಕ ಘಟನೆಯನ್ನು ನಿರ್ಮಿಸಿರುತ್ತಾರೆ. ಆ ಧಾರ್ಮಿಕ ಘಟನೆಗೆ "ಇಸ್ಲಾಮೀ ಶರೀಯತ್" ಅನ್ನುತ್ತಾರೆ. ಅಂತೂ ತಾತ್ಪರ್ಯವೇನೆಂದರೆ, ಇಸ್ಲಾಮ್ ಧರ್ಮವು ಮಾನವ ನಿರ್ಮಿತ ಧರ್ಮವಲ್ಲ. ಜಗತ್ತಿನ ಆದಿಕಾಲದಿಂದ ನಾನಾ ಪ್ರವಾದಿಗಳು ಪರಮಾತ್ಮನ ಆಜ್ಞೆಯಂತೆ ಇಸ್ಲಾಮ್ ಎಂಬ ಕಟ್ಟಡವನ್ನು ಕಟ್ಟುತ್ತ ಬಂದರು. ಕಟ್ಟಕಡೆಗೆ, ಕಡೆಯ ದೇವ–ಪ್ರವಾದಿಗಳಾದ ಹ|| ಮಹಮ್ಮದ ಪೈಗಂಬರರು ಆ ಕಟ್ಟಡವನ್ನು ಪರಿಪೂರ್ಣಗೊಳಿಸಿ, ಅದರ ಮೇಲೆ "ಇಸ್ಲಾಮೀ ಶರಿಯತ್" ಎಂಬ ಕಳಸವನ್ನಿಟ್ಟರು.

## (೨) ಹ|| ಮಹಮ್ಮದ ಪೈಗಂಬರರು

ಶಿಷ್ಯ:— "ಹಜರತ್ ಮಹಮ್ಮದ ಪೈಗಂಬರ" ಎಂದರೆ ಯಾರು?

ಗುರು:— ಹ|| ಮಹಮ್ಮದರು ಪರಮಾತ್ಮನ ಪ್ರವಾದಿಗಳು; ಮುಸಲ್ಮಾನರಾದ ನಾವೆಲ್ಲರೂ ಅವರ ಅನುಯಾಯಿಗಳು.

ಶಿಷ್ಯ:— ಹ|| ಮಹಮ್ಮದರು ಎಲ್ಲಿಯವರು? ಅವರ ತಾಯಿ ತಂದೆಗಳ ಹೆಸರೇನು?

ಗುರುಃ— ಅವರು ಅರಬಸ್ತಾನವೆಂಬ ದೇಶದವರು. ಅರಬಸ್ತಾನದಲ್ಲಿರುವ " ಮಕ್ಕಾ " ಎಂಬ ಪಟ್ಟಣದಲ್ಲಿ ' ಕುರೈಷ್" ಎಂಬ ನಾಮಾಂಕಿತ ಮನೆತನದಲ್ಲಿ ಅವರು ಜನಿಸಿದರು. ಅವರ ಮಾತೆಯವರ ಹೆಸರು " ಬೀಬೀ ಅಮೀನಾ " ಮತ್ತು ಅವರ ತಂದೆಯವರ ಹೆಸರು " ಅಬ್ದುಲ್ಲಾ " ಮತ್ತು ಅವರ ಅಜ್ಜಂದಿರ ಹೆಸರು " ಅಬ್ದುಲ್-ಮುತಲ್ಲಿಬ್ "

ಷ್ಯ:— ಹ|| ಮಹಮ್ಮದರು ಎಷ್ಟು ವರ್ಷಗಳ ಹಿಂದೆ ಹುಟ್ಟಿದರು?

ಗುರು:— ಸುಮಾರು ಹದಿನಾಲ್ಕು ನೂರು ವರ್ಷಗಳ ಹಿಂದೆ, ಅಂದರೆ ಕ್ರಿ. ಶ. ೫೭೧ನೆ ಎಪ್ರಿಲ್ ತಿಂಗಳಿನ ೨೦ನೇ ತಾರೀಖಿನ ದಿವಸ (ಸೋಮವಾರ ದಿವಸ) ಅವರ ಜನನವಾಯಿತು; ಮತ್ತು ತಮ್ಮ ೬೩ನೇ ವಯಸ್ಸಿನಲ್ಲಿ, ಅಂದರೆ, ಕ್ರಿ. ಶ. ೬೩೩ನೇ ಇಸವಿಯಲ್ಲಿ ಸ್ವರ್ಗಸ್ಥರಾದರು.

ಶಿಷ್ಯ:— ಹ|| ಮಹಮ್ಮದರು ಮರಣ ಪರಿಯಂತರವೂ ಮಕ್ಕಾದಲ್ಲಿಯೇ ವಾಸಿಸುತ್ತಿದ್ದರೇನು?

ಗುರು:— ಇಲ್ಲ. ತಮ್ಮ ವಯಸ್ಸಿನ ೫೩ನೆಯ ವರ್ಷದ ವರೆಗೆ ಅವರು ಮಕ್ಕಾಪಟ್ಟಣದಲ್ಲಿ ವಾಸಿಸುತ್ತಿದ್ದರು. ಆ ನಂತರ, ಪರಮಾತ್ಮನ ಆಜ್ಞಾನುಸಾರವಾಗಿ, ಮದೀನಾ ಪಟ್ಟಣಕ್ಕೆ ಹೋಗಿ. ಹತ್ತು ವರ್ಷಗಳವರೆಗೆ ಅಲ್ಲಿಯೇ ವಾಸಮಾಡಿ, ಮದೀನಾದಲ್ಲಿಯೇ ಸ್ವರ್ಗಸ್ಥರಾದರು.

ಶಿಷ್ಯ:— ಹ|| ಮಹಮ್ಮದ ಪೈಗಂಬರರ ಗೋರಿಯು (ಸಮಾಧಿಯು) ಮಕ್ಕಾದಲ್ಲಿ ಇದೆಯೋ ಅಥವಾ ಮದೀನಾದಲ್ಲಿದೆಯೋ?

ಗುರು:— ಮದೀನಾ ನಗರದಲ್ಲಿ ಇದೆ.

ಶಿಷ್ಯ:— 'ಹಿಜರೀ' ಅಂದರೆ ಏನು?

ಗುರು:— ಹಿಜರೀ ಅಂದರೆ ಮುಸಲ್ಮಾನರ ಶಕೆ. ಹ|| ಮಹಮ್ಮದರು ಮಕ್ಕಾ ಪಟ್ಟಣವನ್ನು ಬಿಟ್ಟು ಮದೀನಾ ನಗರಕ್ಕೆ ಹೋದಂದಿನಿಂದ ಈ ಶಕೆಯು ಪ್ರಾರಂಭವಾಗಿದೆ. ಕ್ರಿಸ್ತೀ ಶಕದ ಆರು ನೂರಾ ಇಪ್ಪತ್ತೆರಡನೇ ಇಸವಿಯ ಸಪ್ಟೆಂಬರ ತಿಂಗಳದ ಇಪ್ಪತ್ತನೇ ತಾರೀಖಿನಿಂದ ಹಿಜರೀ ಶಕೆಯು ಪ್ರಾರಂಭವಾಗಿದೆ.

ಶಿಷ್ಯ:— ಹ|| ಮುಹಮ್ಮದರು ದೇವ ಪ್ರವಾದಿಯಾಗಿರುವರು ಎಂಬುದನ್ನು ಹೇಗೆ ಗುರುತಿಸಬೇಕು?

ಗುರು:— ಅವರು ಮಾಡಿ ಹೋದ ಅತ್ತ್ಯುತ್ತಮವಾದ ಮಹತ್ಕಾರ್ಯಗಳನ್ನು ಮತ್ತು ಅವರು ಬೋಧಿಸಿದ ಶ್ರೇಷ್ಠ ಉಪದೇಶಗಳನ್ನು ನೋಡಿದರೆ, ಅವರು ದೇವ - ಪ್ರವಾದಿಗಳೆಂಬುವದು ಸ್ಪಷ್ಟವಾಗುವದು. ಯಾಕೆಂದರೆ, ಪ್ರವಾದಿಗಳ ಹೊರತಾಗಿ ಇತರರಿಗೆ ಅಂಥ ಮಹತ್ಕಾರ್ಯಗಳನ್ನು ಮಾಡಲು ಶಕ್ಯವಾಗಲಾರದು. ಅವರ ಸಮಕಾಲೀನರಾದ ಲಕ್ಷೋಪಲಕ್ಷ ಜನಗಳಿಂದ - ವೈರಿಗಳಿಂದಸಹ- ದೇವ-ಪ್ರವಾದಿಯೆಂದು ಅವರು ಮನ್ನಣೆಯನ್ನು ಪಡೆದಿದ್ದರು. ಅಲ್ಲದೆ, ಹಿಂದಿನ ಪ್ರವಾದಿಗಳಲ್ಲಿಯ ಅನೇಕರು, ಹ|| ಮುಹಮ್ಮದರ ವಿಷಯವಾಗಿ ಭವಿಷ್ಯ ನುಡಿದಿದ್ದರು. ಹ|| ಮುಹಮ್ಮದರ ಜೀವನ ಚರಿತ್ರೆಯನ್ನು ಓದಿದರೆ, ಅವರು ದೈವೀ-ಪುರುಷರು ಎಂಬುವದು ತಟ್ಟನೆ ಹೊಳೆಯುವದು ಇದಲ್ಲದೆ ಮುಹಮ್ಮದರು ದೇವ ಪ್ರವಾದಿಯಾಗಿರುವರೆಂಬುದನ್ನು ಕುರಾನ ಗ್ರಂಥದಲ್ಲಿ ಪರಮಾತ್ಮನು ಅನೇಕ ಕಡೆಗಳಲ್ಲಿ ಹೇಳಿದ್ದಾನೆ.

ಶಿಷ್ಯ:— ಹ|| ಮುಹಮ್ಮದರನ್ನು ಮನ್ನಿಸಬೇಕು; ಎಂಬುದರ ಅರ್ಥವೇನು ?

ಗುರು:—ಹ|| ಮುಹಮ್ಮದರು ದೇವಪ್ರವಾದಿ ಇರುವರೆಂದೂ, ಪ್ರವಾದಿಗಳಲ್ಲಿ ಅವರೇ ಕೊನೆಯವರೆಂದೂ, ಸಕಲ ಮಾನವರಲ್ಲಿ ಅವರೇ ಅತಿ ಶ್ರೇಷ್ಠರಾದವರೆಂದೂ ಶ್ರದ್ಧೆಯನ್ನಿಡಬೇಕು; ಮತ್ತು ಅವರ ವಿಷಯವಾಗಿ ಪ್ರೇಮ ಸದ್ಭಾವನೆಗಳನ್ನು ತಳೆದು, ಅವರು ಬೋಧಿಸಿದ ಉಪದೇಶಗಳಂತೆ ಆಚರಿಸಬೇಕು.

ಶಿಷ್ಯ :— ಹ|| ಮುಹಮ್ಮದರು ದೇವಪ್ರವಾದಿಯಾಗಿರುವರೆಂಬುವದನ್ನು ಮನ್ನಿಸದವರಿಗೆ ಏನೆನ್ನುತ್ತಾರೆ?

ಗುರು:— ಅಂಥವರಿಗೆ ''ಕಾಫಿರ" ಅಥವಾ "ಭವಿ'' ಎನ್ನುತ್ತಾರೆ.

ಶಿಷ್ಯ :— ನಮ್ಮ ಪ್ರವಾದಿಗಳ ಹೊರತಾಗಿ, ಮತ್ತೆ ಇತರ ಪ್ರವಾದಿಗಳು ಆಗಿಹೋಗಿರುವರೇನು?

ಗುರು :— ಅಹುದು ನಮ್ಮ ಪ್ರವಾದಿಗಳಾದ ಹಜ಼ ಮಹಮ್ಮದರ ಪೂರ್ವದಲ್ಲಿ ಅನೇಕ ಪ್ರವಾದಿಗಳನ್ನು ಪರಮಾತ್ಮನು ಕಳುಹಿಸಿದ್ದನು. ಹಿಂದಿನ ಪ್ರವಾದಿಗಳಲ್ಲಿ ಹಜ಼ ಇಬ್ರಾಹೀಮ್, ಹಜ಼ ಇಸ್ಮಾಯೀಲ, ಹಜ಼ ಯಾಕೂಬ, ಹಜ಼ ದಾವೂದ, ಹಜ಼ ಮೂಸಾ, ಹಜ಼ ಈಸಾ ಮೊದಲಾದವರೇ ಮುಖ್ಯರು.

ಶಿಷ್ಯ:— ಪ್ರವಾದಿಗಳ ಸಂಖ್ಯೆಯು ಎಷ್ಟಿದೆ ?

ಗುರು:— ಪ್ರವಾದಿಗಳ ಸಂಖ್ಯೆಯು ಎಷ್ಟಿದೆಯೆಂಬುದು ನಿಶ್ಚಿತವಾಗಿ ಗೊತ್ತಿಲ್ಲ. ಸಹಸ್ರಾರು ಪ್ರವಾದಿಗಳು ಆಗಿ ಹೋಗಿರುವರು. ಕೆಲವರ ಅಭಿಪ್ರಾಯದಂತೆ ೧ ಲಕ್ಷ ೮೦ ಸಾವಿರ ಪೈಗಂಬರರು ಆಗಿ ಹೋಗಿದ್ದಾರೆ.

ಶಿಷ್ಯ:— ಪರಮಾತ್ಮನ ಪ್ರವಾದಿಗಳಲ್ಲಿ ಮೊದಲನೇಯುವರಾರು ಮತ್ತು ಕಡೆಯವರಾರು ?

ಗುರು:— "ಹಜ಼ ಆದಮ" ಇವರು ಮೊದಲಿಗರು ಮತ್ತು "ಹಜ಼ ಮುಹಮ್ಮದರು" ಕಡೆಯವರು.

ಶಿಷ್ಯ:— ನಮ್ಮ ಪ್ರವಾದಿಗಳಾದ ಹಜ಼ ಮಹಮ್ಮದರ ನಂತರ ಯಾವ ಪ್ರವಾದಿಯನ್ನೂ ಪರಮಾತ್ಮನು ಕಳುಹಿಸಿಕೊಟ್ಟಿಲ್ಲವೇ ?

ಗುರು:— ಇಲ್ಲ. ಹಜ಼ ಮಹಮ್ಮದರೇ ಕಡೆಯ ಪ್ರವಾದಿಗಳು. ಇವರ ನಂತರ ಬೇರೆ ಪ್ರವಾದಿಗಳ ಅವಶ್ಯಕತೆ ಇರುವದಿಲ್ಲ. ಯಾಕೆಂದರೆ, ಇಸ್ಲಾಮ್ ಧರ್ಮವು ಪರಿಪೂರ್ಣವಾದ ಧರ್ಮವಾಗಿದೆ.

ಶಿಷ್ಯ:— ನಮ್ಮ ಪ್ರವಾದಿಗಳಾದ ಹಜ಼ ಮಹಮ್ಮದರು ಇತರ ಪ್ರವಾದಿಗಳಿಗಿಂತ ತರಗತಿಯಲ್ಲಿ (ಸ್ಥಾನಮಾನಗಳಲ್ಲಿ) ಹೆಚ್ಚಿನವರೋ ಅಥವಾ ಕಡಿಮೆಯವರೋ ?

ಗುರು:— ಎಲ್ಲ ಪ್ರವಾದಿಗಳಿಗಿಂತ ನಮ್ಮ ಪ್ರವಾದಿಗಳು ಹೆಚ್ಚಿನ ತರಗತಿಯವರು ಇರುತ್ತಾರೆ. ಅಂತೆಯೇ, ಪರಮಾತ್ಮನು ಅವರನ್ನು ಕಟ್ಟಕಡೆಗೆ ಕಳುಹಿಸಿ, ತನ್ನ ಧರ್ಮವನ್ನು (ಇಸ್ಲಾಮ್‌ವನ್ನು) ಅವರಿಂದ ಪರಿಪೂರ್ಣಗೊಳಿಸಿದನು.

ಶಿಷ್ಯ:— ಹಜ಼ ಮಹಮ್ಮದ ಪೈಗಂಬರರ ವಂಶಜರು ಈಗಲೂ ಇದ್ದಾರೆಯೇ ?

ಗುರು:— ಅಹುದು ಇದ್ದಾರೆ. ಜಗತ್ತಿನ ನಾನಾ ಭಾಗಗಳಲ್ಲಿ ಇದ್ದಾರೆ. ಹ|| ಮುಹಮ್ಮದರಿಗೆ ಗಂಡು ಮಕ್ಕಳಿದ್ದಿಲ್ಲ. ಅವರ ಪ್ರೀತಿಯ ಮಗಳಾದ "ಹಜರತ್ ಫಾತಿಮಾ" ಇವರ ಉದರದಲ್ಲಿ (ಹ||ಫಾತಿಮಾ ಇವರ ಪತಿಯ ಹೆಸರು ಹ||ಅಲಿ)"ಹಜರತ್ ಇಮಾಮ ಹಸನ್"ಮತ್ತು"ಹಜರತ್ಇಮಾಮ್ ಹುಸೇನ್" ಎಂಬ ಜಗತ್‌ಪ್ರಸಿದ್ಧ ಸತ್ಪುರುಷರು ಜನಿಸಿದರು. ಈ ಸತ್ಪುರುಷರ ವಂಶಜರು ಜಗತ್ತಿನ ನಾನಾ ಭಾಗಗಳಲ್ಲಿ ಈಗಲೂ ಇದ್ದಾರೆ. ಈ ವಂಶದವರಿಗೆ "ಸಯ್ಯದ್" ಅನ್ನುತ್ತಾರೆ. ಹಿಂದುಸ್ಥಾನದಲ್ಲಿಯಾಗಲಿ, ಅಥವಾ ಜಗತ್ತಿನ ಮತ್ತಾವದೇ ದೇಶದಲ್ಲಿಯಾಗಲೀ ಇಲ್ಲಿಯ ವರೆಗೆ ಆಗಿ ಹೋದಂಥ ಸಾಧು-ಸತ್ಪುರುಷರಲ್ಲಿ (ಔಲಿಯಾಗಳಲ್ಲಿ) ಬಹುತರವಾಗಿ ಎಲ್ಲರೂ ಈ ಸಯ್ಯದ ವಂಶದವರೇ ಇದ್ದಾರೆ.

ಶಿಷ್ಯ:— ಸಯ್ಯದ ಅಂತಾ ಮನೆತನದ ಹೆಸರಿದ್ದವರು ನಮ್ಮ ಹಿಂದುಸ್ಥಾನದಲ್ಲಿ ಅಥವಾ ನಮ್ಮ ಕರ್ನಾಟಕ ಪ್ರಾಂತದಲ್ಲಿ ಅನೇಕ ಜನರು ಇದ್ದಾರೆ. ಅವರೆಲ್ಲರೂ ಪೈಗಂಬರರ ವಂಶದವರೇನು ?

ಗುರು:—ಸಯ್ಯದ ಅಂತಾ ಹೆಸರಿದ್ದ ಮಾತ್ರಕ್ಕೆ, ಪೈಗಂಬರರ ವಂಶಜರೆಂದು ಖಚಿತವಾಗಿ ಹೇಳಲು ಬರುವದಿಲ್ಲ. ಯಾಕೆಂದರೆ, ಸಯ್ಯದ ಅಂತಾ ಹೆಸರನ್ನಿಟ್ಟುಕೊಳ್ಳುವದು ಇತ್ತೀಚೆಗೆ ಒಂದು ಫ್ಯಾಶನ್ ಆಗಿಬಿಟ್ಟಿದೆ.

## (೩) ಕುರಾನ್

ಶಿಷ್ಯ:— ಮುಸಲ್ಮಾನರ ಧರ್ಮ ಗ್ರಂಥದ ಹೆಸರೇನು ?

ಗುರು:— ಮುಸಲ್ಮಾನರ ಧರ್ಮಗ್ರಂಥಕ್ಕೆ "ಕುರಾನ" ಅನ್ನುತ್ತಾರೆ. ಪರಮಾತ್ಮನು ಕುರಾನ ಗ್ರಂಥವನ್ನು ಹ||ಮುಹಮ್ಮದ ಪೈಗಂಬರರಿಗೆ ಕಳುಹಿಸಿದನು.

ಶಿಷ್ಯ:—ಕುರಾನದ ಹೊರ್ತಾಗಿ ಇತರ ಗ್ರಂಥಗಳನ್ನು ಸಹ, ಪರಮಾತ್ಮನು ಕಳುಹಿಸಿದ್ದಾನೆಯೇ ?

ಗುರು:—ಅಹುದು. ಕುರಾನದ ಹೊರ್ತಾಗಿ ಅದೆಷ್ಟೋ ಗ್ರಂಥಗಳನ್ನು ಪರಮಾತ್ಮನು ಬೇರೆ ಬೇರೆ ಪೈಗಂಬರರಿಗಾಗಿ ಕಳುಹಿಸಿದ್ದಾನೆ. ಅಂಥವುಗಳಲ್ಲಿ

ಮುಖ್ಯವಾದವುಗಳೆಂದರೆ, "ಜಬ್ಬೂರ" "ತೌರೇತ್" ಮತ್ತು "ಇಂಜೀಲ". ಜಬ್ಬೂರವನ್ನು ಹಜರತ್ ದಾವೂದರಿಗಾಗಿ, ತೌರೇತವನ್ನು ಹ|| ಮೂಸಾ ಇವರಿಗಾಗಿ ಮತ್ತು ಇಂಜೀಲವನ್ನು (ಬಾಯ್ಬಲವನ್ನು) ಹ||ಈಸಾ (ಯೇಸು ಕ್ರೈಸ್ತ) ಇವರಿಗಾಗಿ ಪರಮಾತ್ಮನು ಕಳುಹಿಸಿದ್ದಾನೆ.

ಶಿಷ್ಯ:— ದೇವ ಗ್ರಂಥಗಳ ಅನುಯಾಯಿಗಳಿಗೆ ಏನೆನ್ನುತ್ತಾರೆ ?

ಗುರು:— ಪರಮಾತ್ಮನಿಂದ ಕಳುಹಿಸಲ್ಪಟ್ಟ ದೇವಗ್ರಂಥಗಳ ಅನು-ಯಾಯಿಗಳಿಗೆ "ಅಹ್ಲೆ ಕಿತಾಬ್" (ಗ್ರಂಥದವರು) ಅಂತಾ ಅನ್ನುತ್ತಾರೆ.

ಶಿಷ್ಯ:— ತನ್ನ ಗ್ರಂಥಗಳನ್ನು ಪರಮಾತ್ಮನು ಪ್ರವಾದಿಗಳಿಗಾಗಿ ಹೇಗೆ ಕಳುಹಿಸಿದನು ?

ಗುರು:— "ಹ||ಜಿಬ್ರಯೀಲ" ಎಂಬ ದೇವದೂತ ಶ್ರೇಷ್ಠರ ವತಿಯಿಂದ ಪರಮಾತ್ಮನು ತನ್ನ ಸಂದೇಶವನ್ನು ಆ ಆ ಪ್ರವಾದಿಗಳಿಗೆ ಕಳಿಸುತ್ತಿದ್ದನು. ಅಂಥ ಸಂದೇಶಗಳನ್ನು ಆ ಆ ಪ್ರವಾದಿಗಳು ಬರೆದಿಟ್ಟುಕೊಳ್ಳುತ್ತಿದ್ದರು. ಹೀಗೆ ಜಿಬ್ರಯೀಲರ ವತಿಯಿಂದ ಬಂದು ಮುಟ್ಟಿದ ದೇವ ಸಂದೇಶಗಳ ಸಂಗ್ರಹಕ್ಕೆ "ಧರ್ಮ-ಗ್ರಂಥ" ಎನ್ನುತ್ತಾರೆ.

ಶಿಷ್ಯ:— ಹ|| ಮುಹಮ್ಮದರಿಗಾಗಿ ಕುರಾನವು ಒಮ್ಮೆಲೇ ಇಡಿಯಾಗಿ ಕಳುಹಿಸಲ್ಪಟ್ಟಿತೋ ಅಥವಾ ಬಿಡಿ ಬಿಡಿಯಾಗಿ ಕಳುಹಿಸಲ್ಪಟ್ಟಿತೋ ?

ಗುರು:— ಒಮ್ಮೆಲೇ ಕಳುಹಿಸಲ್ಪಡಲಿಲ್ಲ. ಅವಶ್ಯ ಬಿದ್ದಂತೆ ಬಿಡಿ ಬಿಡಿಯಾಗಿ ಕಳುಹಿಸಲ್ಪಟ್ಟಿತು. ಪರಮಾತ್ಮನ ಆಜ್ಞೆಯಂತೆ ಹ||ಜಿಬ್ರಯೀಲರು ಬಂದು ತಿಳಿಸಿದಷ್ಟನ್ನು ಹ|| ಮುಹಮ್ಮದರು ಚನ್ನಾಗಿ ನೆನಪಿಟ್ಟುಕೊಂಡು, ಎರಡನೆಯವರಿಂದ ಬರೆಯಿಸುತ್ತಿದ್ದರು.

ಶಿಷ್ಯ:— ಹ||ಮುಹಮ್ಮದರು ಸ್ವತಃ ತಾವೇ ಯಾಕೆ ಬರೆಯುತ್ತಿದ್ದಿಲ್ಲ ?

ಗುರು:—ಅವರು ನಿರಕ್ಷರಿಗಳಿದ್ದರು. ಅಂದರೆ, ಓಮ ಬರೆಯಲು ಅವರಿಗೆ ಬರುತ್ತಿದ್ದಿಲ್ಲ. ಅದರೂ ಸಹ ಪರಮಾತ್ಮನು ಅವರಿಗೆ, ಎಲ್ಲ ಮಾನವ ರಕಿಂತಲೂ ಹೆಚ್ಚಿನ ಬುದ್ಧಿಮತ್ತೆಯನ್ನೂ, ಜ್ಞಾನ ಭಾಂಡಾರವನ್ನೂ ದಯಪಾಲಿಸಿದ್ದನು.

ಶಿಷ್ಯ:—ಕುರಾನವು ಎಷ್ಟು ಅವಧಿಯೊಳಗೆ ಸಂಪೂರ್ಣವಾಗಿ ಕಳುಹಿಸಲ್ಪಟ್ಟಿತು ?

ಗುರು:—ಒಟ್ಟು ಇಪ್ಪತ್ತುಮೂರು ವರ್ಷಗಳಲ್ಲಿ.

ಶಿಷ್ಯ:—ಹ|| ಜಿಬ್ರಯೀಲ ಅಂವರೆ ಯಾರು ?

ಗುರು:—ಈ ಸೃಷ್ಟಿಯ ಸಕಲ ಕಾರ್ಯಗಳನ್ನು ಪರಮಾತ್ಮನು ದೇವದೂತರು (ಮಲಾಯಿಕ್) ಎಂಬ ತನ್ನ ಕಿಂಕರರ ಮತಿಯಿಂದ ನಡೆಯಿಸುವನು. ಪ್ರತಿ ದೇವದೂತನಿಗೆ ಒಂದೊಂದು ಬಗೆಯ ಕಾರ್ಯವನ್ನು ಒಪ್ಪಿಸಿರುವನು, ದೇವದೂತರು ಅಸಂಖ್ಯರಿರುವರು. ನಮ್ಮಂತೆ ಅವರು ಜಡ ದೇಹಿಗಳಲ್ಲ. ಪ್ರಕಾಶದಿಂದ ಅವರ ಉತ್ಪತ್ತಿಯಾಗಿದೆ. ಸಕಲ ದೇವದೂತರಲ್ಲಿ ಹಜರತ್ ಜಿಬ್ರಯೀಲರೇ ಮಹಾ ಶ್ರೇಷ್ಠರು. ಪರಮಾತ್ಮನ ಸಂದೇಶಗಳನ್ನು ಪ್ರವಾದಿಗಳಿಗೆ ತಂದು ಮುಟ್ಟಿಸುವದೇ ಹ|| ಜಿಬ್ರಯೀಲರ ಕೆಲಸವಾಗಿದೆ.

ಶಿಷ್ಯ:— ಕುರಾನವು ಯಾವ ಭಾಷೆಯಲ್ಲಿದೆ ?

ಗುರು:—ಕುರಾನವು ಅರಬೀ ಭಾಷೆಯಲ್ಲಿದೆ.

ಶಿಷ್ಯ:—ಕುರಾನವು ಎಷ್ಟು ಭಾಗಗಳಾಗಿ ವಿಂಗಡಿಸಲ್ಪಟ್ಟಿದೆ ?

ಗುರು:—ಕುರಾನವು ಮೂವತ್ತು ಭಾಗಗಳಾಗಿ ವಿಂಗಡಿಸಲ್ಪಟ್ಟಿವೆ. ಅಂದರೆ, ಕುರಾನದಲ್ಲಿ ಮೂವತ್ತು ಭಾಗಗಳಿರುತ್ತವೆ. "ಪಾರಾಯೆ-ಅಲಿಫ್" ಎಂಬುದು ಮೊದಲನೆಯದು ಮತ್ತು "ಪಾರಾಯೆ-ಅಮ್" ಎಂಬುದು ಮೂವತ್ತನೆಯದು.

ಶಿಷ್ಯ:—ಕುರಾನದಲ್ಲಿ ಅಧ್ಯಾಯಗಳು (ಸೂರಾತ) ಎಷ್ಟಿರುತ್ತವೆ ?

ಗುರು:—ಕುರಾನದಲ್ಲಿ ಒಟ್ಟು ಒಂದುನೂರಾ ಹದಿನಾಲ್ಕು ಅಧ್ಯಾಯ-ಗಳಿರುತ್ತವೆ.

ಶಿಷ್ಯ:—ಕುರಾನದಲ್ಲಿ ಸಂಧಿಗಳು (ರುಕುಗಳು) ಎಷ್ಟಿರುತ್ತವೆ ?

ಗುರು:—ಕುರಾನದಲ್ಲಿ ಒಟ್ಟು ಐದು ನೂರಾ ನಾಲ್ವತ್ತು ಸಂಧಿಗಳಿರುತ್ತವೆ.

ಶಿಷ್ಯ:— ಕುರಾನದಲ್ಲಿ ಶ್ಲೋಕಗಳು (ಆಯತಗಳು) ಎಷ್ಟಿರುತ್ತವೆ ?

ಗುರು:—ಕುರಾನದಲ್ಲಿ ಒಟ್ಟು ಆರು ಸಾವಿರದಾ ಆರುನೂರಾ ಅರವತ್ತಾರು ಶ್ಲೋಕಗಳಿರುತ್ತವೆ.

ಶಿಷ್ಯ:—ಕುರಾನದಲ್ಲಿ ಎಷ್ಟು ಶಬ್ದಗಳು ಇರುತ್ತವೆ?

ಗುರು:—ಕುರಾನದಲ್ಲಿ ಎಪ್ಪತ್ತಾರು ಸಾವಿರದಾ ನಾಲ್ಕುನೂರಾ ಮೂವತ್ತು ಶಬ್ದಗಳು ಇರುತ್ತವೆ.

ಶಿಷ್ಯ:—ಕುರಾನದಲ್ಲಿಯ ಅಕ್ಷರಗಳ ಸಂಖ್ಯೆಯು ಎಷ್ಟಿರುತ್ತದೆ?

ಗುರು:—ಕುರಾನದಲ್ಲಿಯ ಅಕ್ಷರಗಳ ಒಟ್ಟು ಸಂಖ್ಯೆಯು ಮೂರು ಲಕ್ಷ ಇಪ್ಪತ್ತುಮೂರು ಸಾವಿರದಾ ಮೂರುನೂರಾ ಇಪ್ಪತ್ತೇಳು (೩೨೩೨೭) ಇರುತ್ತದೆ

ಶಿಷ್ಯ:—ಕುರಾನವು ದೇವಗ್ರುಂಥವಾಗಿದೆ ಎಂಬುವದನ್ನು ಯಾರು ನಂಬುವದಿಲ್ಲವೊ, ಅಂಥವರಿಗೆ ಏನೆನ್ನುತ್ತಾರೆ?

ಗುರು:—ಅಂಥವರಿಗೆ "ಕಾಫಿರ್" ಅನ್ನುತ್ತಾರೆ.

## (೪) ಈಮಾನ್

"ಈಮಾನ್" ಅಂದರೆ ಏನು?

ಗುರು:— ಈಮಾನ್ ಅಂದರೆ, ಶ್ರದ್ಧೆ. ಪರಮಾತ್ಮನಲ್ಲಿಯೂ ಪರಮಾತ್ಮನ ಸಕಲ ಆಜ್ಞೆಗಳಲ್ಲಿಯೂ ದೃಢವಾದ ಶ್ರದ್ಧೆಯನ್ನಿಡುವದಕ್ಕೆ "ಈಮಾನ್" ಅನ್ನುತ್ತಾರೆ.

ಶಿಷ್ಯ:—ಪರಮಾತ್ಮನಲ್ಲಿಯೂ ಮತ್ತು ಪರಮಾತ್ಮನ ಆಜ್ಞೆಗಳಲ್ಲಿಯೂ ಶ್ರದ್ಧೆಯನ್ನಿಡುವವನಿಗೆ ಏನೆನ್ನುತ್ತಾರೆ?

ಗುರು:—ಅಂಥವರಿಗೆ "ಮೂಮೀನ್" ಅಂದರೆ, "ಶ್ರದ್ಧಾವಂತ" ಅನ್ನುತ್ತಾರೆ.

ಶಿ:—"ಮೂಮೀನ್" ಮತ್ತು "ಮುಸ್ಲಿಮ್" ಇವರಿಬ್ಬರಲ್ಲಿಯ ಅಂತರವೇನು?

ಗುರು:—ಪರಮಾತ್ಮನಲ್ಲಿಯೂ ಪರಮಾತ್ಮನ ಸಕಲ ವಾಕ್ಯಗಳಲ್ಲಿಯೂ ಯಾವನು ಶ್ರದ್ಧೆಯನ್ನಿಟ್ಟಿರುವನೋ ಅಂಥವನಿಗೆ–ಶ್ರದ್ಧೆಗೆ ಅನುಗುಣವಾಗಿ ಅವನು ಆಚರಿಸಲಿ ಅಥವಾ ಆಚರಿಸದಿರಲಿ– "ಮೂಮಿನ್" ಅನ್ನುತ್ತಾರೆ; ಆದರೆ, ಯಾವನು ಶ್ರದ್ಧೆಯನ್ನಿಟ್ಟು ಶ್ರದ್ಧೆಗೆ ಅನುಗುಣವಾಗಿ ಆಚರಿಸುವನೋ ಅಂಥವನಿಗೆ "ಮುಸ್ಲಿಮ್" ಅನ್ನುತ್ತಾರೆ.

ಶಿಷ್ಯ:—ಈಮಾನದ ಬೀಜಮಂತ್ರವು ಯಾವದು ?

ಗುರು:—ಈಮಾನದ ಬೀಜಮಂತ್ರಕ್ಕೆ "ಕಲ್ಮಯೇ–ತೈಯ್ಯಿಬಾ" ಅನ್ನುತ್ತಾರೆ. ಆ ಮಂತ್ರವು ಹೀಗಿರುತ್ತದೆ:—

"ಲಾ ಇಲಾಹಾ ಇಲ್ಲಲ್ಲಾಹ್, ಮುಹಮ್ಮದುರ್ರಸೂಲುಲ್ಲಾಹ್"

ಅನು॥ ದೇವನಂ ಬಿಟ್ಟು ಮತ್ತಾರಿಲ್ಲ ಪೂಜಿತರು।
ದೇವನ ಪ್ರವಾದಿ ಆಹುದು ಮುಹಮ್ಮದರು॥

ಶಿಷ್ಯ:—"ಕಲ್ಮಯೆ—ಷಹಾದತ್" ಅಂದರೆ ಯಾವದು ?

ಗುರು:—ಕಲ್ಮಯೆ–ಷಹಾದತ್ ಹೀಗಿರುತ್ತದೆ:–

"ಅಷ್ಹದು ಅಲ್ ಲಾ ಇಲಾಹಾ ಇಲ್ಲಲ್ಲಾಹು, ವ ಅಹ್ದಹು ಲಾ ಷರೀಕ ಲಹು; ವ ಅಷ್ಹದು ಅನ್ನ, ಮುಹಮ್ಮದನ್ ಅಬ್ದುಹು ವ ರಸೂಲುಹು."

ಅನು॥ ದೇವನಂ ಬಿಟ್ಟು, ಮತ್ತಾವನಿಲ್ಲ ಪೂಜಿತನು।
ಏಕೈಕನವನು, ಮತ್ತಾವನಿಲ್ಲ ಅವನಂಥವನು।
ಎಂಬುವನು ನನ್ನ ಮನಸಾಕ್ಷಿಯಿಂ ಹೇಳುವೆನು॥೧॥
ಮುಹಮ್ಮದರು ದೇವಭಕ್ತಾಗ್ರಣಿಯಾಗಿಹರೆಂಬುವನು।
ವ ಮುಹಮ್ಮದರು ದೇವ ಪ್ರವಾದಿಯಾಗಿಹರೆಂಬುವನು।
ನನ್ನ ಮನವನು ಸಾಕ್ಷಿಗುಟ್ಟ ನಾ ಹೇಳುವೆನು॥೨॥

ಶಿಷ್ಯ:— "ಈಮಾನೆ ಮುಜಮ್ಮಿಲ್" ಅಂದರೆ ಯಾವದು ?

ಗುರು:— ಈಮಾನೆ ಮುಜಮ್ಮಿಲ್ ಹೀಗಿರುತ್ತದೆ:–

"ಆಮನ್ತು ಬಿಲ್ಲಾಹಿ ಕಮಾ ಹುವ ಬಿ ಅಸ್ಮಾಯಿಹಿ
ವ ಸಿಫಾತಿಹಿ, ವ ಕಬಿಲ್ತು ಜಮೀಅ ಅಹ್ಕಾಮಿಹಿ."

ಅನು॥ ನಂಬಿಗೆಯನ್ನಿಟ್ಟಿರುವೆನು ದೇವನಲಿ, ದೇವನಾಮ ರೂಪಗಳಲಿ |
ವ ಇಟ್ಟಿರುವೆನು ನಂಬಿಗೆಯನು ದೇವನ ಸಕಲ ಗುಣಗಳಲಿ |
ವ ದೇವನ ಸಕಲಾಜ್ಞೆಗಳನು ಒಪ್ಪಿಕೊಂಡಿರುವೆನು ನಿಜದಲಿ ||

ಶಿಷ್ಯ:— "ಈಮಾನೆ-ಮುಫಸ್ಸಿಲ್" ಅಂದರೆ ಯಾವದು ?

ಗುರು:— ಈಮಾನೆ-ಮುಫಸ್ಸಿಲ್ ಹೀಗಿರುತ್ತದೆ:-

"ಆಮಂತು ಬಿಲ್ಲಾಹಿ ವ ಮಲಾಯಿಕತಿಹಿ ವ ಕುತುಬಿಹಿ,
ವ ರಸೂಲಿಹಿ ವಲ್ ಯೌಮಿಲ್ ಆಖಿರಿ, ವಲ್ ಕದ್ರಿ ಖೈರಿಹಿ
ವ ಷರ್ರಿಹಿ ಮಿನಲ್ಲಾಹಿ ತಆಲಾ, ವಲ್‌ಬಅಸಿ ಬಾದಲ್‌ಮೌತ್."

ಅನು॥ ನಂಬಿರುವೆನು ದೇವನನು ದೇವದೂತರನು ದೇವಗ್ರಂಥಗಳನು |
ವ ನಂಬಿರುವೆನು ದೇವ ಪ್ರವಾದಿಗಳನು ವ ಪ್ರಳಯದಿನವನು |
ವ ನಂಬಿರುವೆನು ಒಳ್ಳೆಕೆಡಕು ಪ್ರಾರಬ್ಧಗಳಂ ದೇವನಿತ್ತಿಹನೆಂಬುದನು |
ವ ನ್ಯಾಯದಿನದಲಿ ದೇವ ಸತ್ತವರನು ಮತ್ತೆ ಎಬ್ಬಿಸುವನೆಂಬುದನು ||

ಷ್ಯ:— ಮುಸಲ್ಮಾನನು ಯಾವ ಯಾವದರಲ್ಲಿ ಶ್ರದ್ಧೆಗಳನ್ನು ಇಡತಕ್ಕದ್ದು ?

ಗುರು:— ಮುಸಲ್ಮಾನನಾದಂಥವನು ಏಳು ವಸ್ತುಗಳಲ್ಲಿ (ವಿಷಯಗಳಲ್ಲಿ) ಶ್ರದ್ಧೆಯನ್ನು ಇಡತಕ್ಕದ್ದು. ಇದಕ್ಕೆ "ಸಪ್ತ-ಶ್ರದ್ಧೆ" ಅನ್ನುತ್ತಾರೆ. ಈಮಾನೆ ಮುಫಸ್ಸಿಲ್‌ದಲ್ಲಿ ಇದರ ವಿವರಣೆ ಇದೆ. ಆ ಏಳು ತರದ ಶ್ರದ್ಧೆಗಳು ಯಾವವೆಂದರೆ:-

(೧) ಪರಮಾತ್ಮನಲ್ಲಿ ಶ್ರದ್ಧೆ; (೨) ದೇವದೂತರಲ್ಲಿ ಶ್ರದ್ಧೆ; (೩) ದೇವ ಗ್ರಂಥಗಳಲ್ಲಿ ಶ್ರದ್ಧೆ; (೪) ದೇವಪ್ರವಾದಿಗಳಲ್ಲಿ ಶ್ರದ್ಧೆ; (೫) ಪ್ರಳಯ ದಿನವಲ್ಲಿ ಅರ್ಥಾತ್ ನ್ಯಾಯದಿನದಲ್ಲಿ ಶ್ರದ್ಧೆ; (೬) ಒಳ್ಳೆಯದು ಇರಲಿ ಅಥವಾ ಕೆಡಕು ಇರಲಿ, ಪ್ರಾರಬ್ಧವು ದೇವದತ್ತವಾಗಿದೆ ಎಂಬುವದರಲ್ಲಿ ಶ್ರದ್ಧೆ; (೭) ಮತ್ತು ಮೃತರಾದವರನ್ನೆಲ್ಲ ಪರಮಾತ್ಮನು, ಪ್ರಳಯವಾದನಂತರ ನ್ಯಾಯದಾನದ ಸಮಯದಲ್ಲಿ ಮತ್ತೊಮ್ಮೆ ಜೀವದುಂಬಿಸಿ ಎಬ್ಬಿಸುವನೆಂಬುದರಲ್ಲಿ ಶ್ರದ್ಧೆ. ಈ ಏಳು ವಿಷಯಗಳಲ್ಲಿ ಶ್ರದ್ಧೆಗಳನ್ನು ಇಡತಕ್ಕದ್ದು.

ಶಿಷ್ಯ:— ಮೇಲಿನ ಏಳರಲ್ಲಿಯ ಕೆಲವುಗಳಲ್ಲಿ ಶ್ರದ್ಧೆಯನ್ನಿಟ್ಟು ಕೆಲವುಗಳಲ್ಲಿ ಶ್ರದ್ಧೆಯನ್ನು ಇಡದಂಥವರಿಗೆ "ಮುಸಲ್ಮಾನ" ಅಂತಾ ಅನ್ನಬೇಕೋ?

ಗುರು:— ಅಲ್ಲ; ಅನ್ನಬಾರದು. ಅಂಥವರು ನಿಜವಾದ ಮುಸಲ್ಮಾನರಾಗಲಾರರು. ಮುಸಲ್ಮಾನರಾದವರು ಈಮಾನೆ-ಮುಫಸ್ಸಿಲದಲ್ಲಿ ಹೇಳಿದ ಎಲ್ಲವುಗಳಲ್ಲಿಯೂ ಶ್ರದ್ಧೆಯನ್ನು ಇಡತಕ್ಕದ್ದು.

ಶಿಷ್ಯ:— ಪರಮಾತ್ಮನಲ್ಲಿ ಶ್ರದ್ಧೆಯನ್ನಿಡಬೇಕು ಎಂಬುವದರ ಅರ್ಥವೇನು?

ಗುರು:— ಪರಮಾತ್ಮನು ಒಬ್ಬನೇ ಇರುವನೆಂದೂ, ಆತನ ಸರಿಸಮಾನರು ಮತ್ತಾರಿಲ್ಲೆಂದೂ, ಶ್ರದ್ಧೆಯನ್ನಿಡಬೇಕು; ಮತ್ತು ಪರಮಾತ್ಮನ ಗುಣ-ಸ್ವರೂಪಗಳಲ್ಲಿಯೂ ಕುರಾನ ಗ್ರಂಥದಲ್ಲಿ ಅವನು ಹೇಳಿರುವ ಎಲ್ಲ ಮಾತುಗಳಲ್ಲಿಯೂ, ಶ್ರದ್ಧೆಯನ್ನಿಡಬೇಕು.

ಶಿಷ್ಯ:— ಪರಮಾತ್ಮನ ವಿಷಯವಾಗಿ ಇಸ್ಲಾಮ್ ಧರ್ಮವು ಏನು ಹೇಳುತ್ತದೆ?

ಗುರು:— ಪರಮಾತ್ಮನ ವಿಷಯವಾಗಿ ಇಸ್ಲಾಮು ಧರ್ಮವು ಹೇಳುವದೇನೆಂದರೆ:-

(೧) [ಅಲ್ಲಾಹು ವ್ಹಿದ್] ಪರಮಾತ್ಮನು ಒಬ್ಬಾತನೇ ಇರುವನು, ಅಂದರೆ, ಪರಮಾತ್ಮನಂಥ ವ್ಯಕ್ತಿ ಮತ್ತೊಂದಿಲ್ಲ. ಪರಮಾತ್ಮನಿಗೆ ಸರಿಸಮಾನರಾದವರು ಇಡೀ ಬ್ರಹ್ಮಾಂಡದಲ್ಲಿ ಯಾರೂ ಇರುವದಿಲ್ಲ. ಬ್ರಹ್ಮಾಂಡದಲ್ಲಿರುವ ಯಾವದೇ ವಸ್ತು, ಅಥವಾ ಶಕ್ತಿ, ಅಥವಾ ವ್ಯಕ್ತಿ, ಪರಮಾತ್ಮನನ್ನು ಸರಿಗಟ್ಟಲಾರದು.

(೨) [ರಬ್ಬಿಲ್ ಆಲಮೀನ] ಸಕಲ ಲೋಕಗಳಿಗೆಲ್ಲ ಪರಮಾತ್ಮನೇ ಪ್ರಭುವಾಗಿದ್ದಾನೆ, ಅಂದರೆ, ಸೂರ್ಯ. ಚಂದ್ರ, ಪೃಥ್ವಿಯಾದಿ ಲೋಕಗಳಿಗೆಲ್ಲ ಪರಮಾತ್ಮನೊಬ್ಬನೇ ನಿರ್ಮಾಪಕನೂ, ಒಡೆಯನೂ, ಸಂಚಾಲಕನೂ, ಪೋಷಕನೂ ಸಂಹಾರಕನೂ ಆಗಿದ್ದಾನೆ; ಮತ್ತು ಸಕಲ ಶಕ್ತಿ, ವಿದ್ಯೆ, ಐಶ್ವರ್ಯಾದಿಗಳಿಗೆಲ್ಲ ಅವನೇ ಮೂಲಾಧಾರನಾಗಿದ್ದಾನೆ.

(೩) [ ಕುಲ್ಲಿ ಷೈಯಿನ್ ಕದೀರ್ ] ಪರಮಾತ್ಮನು ಸರ್ವಕರ್ತೃ ಆಗಿರುತ್ತಾನೆ, ಅಂದರೆ, ತನ್ನ ಮನಸ್ಸಿಗೆ ಸರಿಬರುವದೆಲ್ಲವನ್ನು ಮಾಡ ಬಲ್ಲವನಾಗಿದ್ದಾನೆ. ಇದ್ದದ್ದನ್ನು ಅಳಿಸಿ ಇಲ್ಲದ್ದನ್ನು ನಿರ್ಮಿಸಬಲ್ಲನು; ಪಶ್ಚಿಮವನ್ನು ಪೂರ್ವವನ್ನಾಗಿ ಮಾಡಿ, ಪೂರ್ವವನ್ನು ಪಶ್ಚಿಮವನ್ನಾಗಿ ಮಾರ್ಪಡಿಸಬಲ್ಲನು; ತಿಪ್ಪೆಯನ್ನು ಉಪ್ಪರಿಗೆಯನ್ನಾಗಿ ಮಾಡಿ, ಉಪ್ಪರಿಗೆ ಯನ್ನು ಬೇಕಾದಾಗ ಉರಳಿಸಬಲ್ಲನು; ಮೂಢನನ್ನು ಜ್ಞಾನಿಯನ್ನಾಗಿ ಮಾಡಿ, ಜ್ಞಾನಿಯನ್ನು ದಿಗ್ಮೂಢಿಸಬಲ್ಲನು; ಬಡವನನ್ನು ಬಲ್ಲಿದನನ್ನಾಗಿ ಮಾಡಿ, ಬಲ್ಲಿದನನ್ನು ಬೇಕಾದಾಗ ದರಿದ್ರಿಸಬಲ್ಲನು; ಮತ್ತು ತಾನಿಚ್ಛಿಸಿದರೆ ಬೇಕಾದ್ದನ್ನು ಕೊಡಲೂ ಬಲ್ಲನು ಕಸಿದುಕೊಳ್ಳಲೂ ಬಲ್ಲನು.

(೪) [ ಕುಲ್ಲಿ ಷೈಯಿನ್ ಅಲೀಮ್ ]ಪರಮಾತ್ಮನು ಸರ್ವಜ್ಞನಿದ್ದಾನೆ, ಅಂದರೆ, ಈ ಬ್ರಹ್ಮಾಂಡದಲ್ಲಿರುವ ಸಕಲ ವಸ್ತುಗಳ ತ್ರಿಕಾಲಜ್ಞಾನವು ಅವನಿಗಿದೆ. ಅವನಿಗೆ ಗೊತ್ತಾಗದಂತಹದು ಅಥವಾ ಅವನಿಗೆ ತಿಳಿಯ ಲಾರದಂತಹದು ಯಾವದೂ ಇಲ್ಲ. ಪ್ರತಿಯೊಂದರ ಅಂತರ್ಬಾಹ್ಯಗಳನ್ನು ಅವನು ತಿಳಿದವನಿರುವನು.

(೫) [ ಕುಲ್ಲಿ ಷೈಯಿನ್ ಮುಹೀತ್ ] ಪರಮಾತ್ಮನು ಸರ್ವವ್ಯಾಪಿ ಯಾಗಿರುವನು, ಅಂದರೆ, ದಶದಿಕ್ಕುಗಳಲ್ಲಿಯೂ ಅವನ ಅಸ್ತಿತ್ವವಿದೆ. ಯಾವ ರೀತಿಯಾಗಿ ಹಾಲಿನ ಪ್ರತಿ ಹನಿಯಲ್ಲಿಯೂ ಬೆಣ್ಣೆಯು ಅಡಕವಾಗಿ-ದೆಯೋ, ಅದೇ ರೀತಿಯಾಗಿ ಪರಮಾತ್ಮನು ಬ್ರಹ್ಮಾಂಡದ ಕಣಕಣ ಗಳಲ್ಲಿಯೂ ಅಡಕವಾಗಿರುತ್ತಾನೆ. ಅವನಿಲ್ಲದ ಸ್ಥಳವೇ ಇಲ್ಲ.

(೬) [ ಅಲ್ಲಾಹುಸ್ಸಮದ್ ] ಪರಮಾತ್ಮನು ನಿರಾವಲಂಬಿಯಾಗಿ ರುವನು, ಅಂದರೆ, ಯಾವದೇ ಅವಶ್ಯಕತೆಗೆ ಆತನು ಆಧೀನನಾಗಿಲ್ಲ. ಗಾಳಿ, ನೀರು, ಆಹಾರಾದಿಗಳಿಂದಲೂ, ಸುಖ, ದುಃಖ, ಆಶೆ, ಚಿಂತ್ಯಾದಿ ಗಳಿಂದಲೂ, ಯೌವನ, ಮುಪ್ಪು, ಮರಣಾದಿಗಳಿಂದಲೂ, ಅವನು ನಿರ್ಲಿಪ್ತ ನಿರುವನು.

(೭) [ಲಮ್ ಯಲಿದ್ ವ ಲಮ್ ಯೂಲದ್] ಪರಮಾತ್ಮನು ನಿರ್ಜನಕನೂ ಮತ್ತು ನಿರ್ಜನಿತನೂ ಇರುವನು, ಅಂದರೆ, ಯಾರನ್ನು

ಅವನು ಹಡೆದಿಲ್ಲ ಮತ್ತು ಯಾರಿಂದಲೂ ಅವನು ಹಡೆಯಲ್ಪಟ್ಟಿಲ್ಲ. ಪರಮಾತ್ಮನಿಗೆ ತಾಯಿ, ತಂದೆ, ಹೆಂಡರು, ಮಕ್ಕಳು, ಮರಿಗಳಿಲ್ಲ; ಒಡಹುಟ್ಟಿದ ಬಂಧುಗಳಿಲ್ಲ; ಮತ್ತು ಆಪ್ತೇಷ್ಟರಿಲ್ಲ.

(೮) [ಖ್ವಿಕಮಲ್ ಹಾಕಿಮೀನ್]ಪರಮಾತ್ಮನು ಬಲಾಢ್ಯರಿಗಿಂತಲೂ ಮಹಾಬಲಾಢ್ಯನಿರುವನು, ಅಂದರೆ, ಅವನಿಗೆ ಎದುರಾಗಿ ನಿಲ್ಲುವ ಸಾಮರ್ಥ್ಯ ಯಾರಲ್ಲಿಯೂ ಇರುವದಿಲ್ಲ.

ಅಲ್ಲದೆ, ಪರಮಾತ್ಮನು ಮಹಾದಯಘನನೂ, ಕರುಣಾನಿಧಿಯೂ, ನ್ಯಾಯತತ್ಪರನೂ, ಕ್ಷಮಾಪತಿಯೂ, ಭಕ್ತವತ್ಸಲನೂ, ದುಷ್ಟಸಂಹಾರಕನೂ ಆಗಿರುವನಲ್ಲದೆ ಸಕಲ ಸ್ತುತಿಗಳಿಗೆ ಅರ್ಹನಾಗಿದ್ದಾನೆ.

ಶಿಷ್ಯ:— ದೇವದೂತರಲ್ಲಿ ಶ್ರದ್ಧೆಯಿಡಬೇಕು ಅಂದರೇನು ?

ಗುರು:— ಅಂದರೆ, ದೇವದೂತರ ಅಸ್ತಿತ್ವವನ್ನು ಮನ್ನಿಸಬೇಕು. ಮತ್ತು ಅವರ ವಿಷಯವಾಗಿ ಪರಮಾತ್ಮನು ಮತ್ತು ಪ್ರವಾದಿಗಳು ಹೇಳಿದ ಎಲ್ಲ ಮಾತುಗಳಲ್ಲಿಯೂ ಶ್ರದ್ಧೆಯನ್ನಿಡಬೇಕು.

ಶಿಷ್ಯ:— ದೇವದೂತರಲ್ಲಿ ಶ್ರೇಷ್ಠರಾದವರು ಯಾರ್ಯಾರು ?

ಗುರು:— ದೇವದೂತರಲ್ಲಿ ಶ್ರೇಷ್ಠರಾದವರು ನಾಲ್ವರು ಇರುತ್ತಾರೆ. ಅವರಾರೆಂದರೆ:—

(೧) ಹ॥ ಜಿಬ್ರಯೀಲ್:- ಪರಮಾತ್ಮನ ಸಂದೇಶಗಳನ್ನು ಇವರು ಪ್ರವಾದಿಗಳಿಗೆ ಮುಟ್ಟಿಸುತ್ತಿದ್ದರು.

(೨) ಹ॥ ಮೀಕಾಯಿಲ್:- ಮಳೆ ನಿಯಂತ್ರಿಸುವದು ಮತ್ತು ಸಕಲ ಜೀವಿಗಳಿಗೆ ಅನ್ನವನ್ನೊದಗಿಸುವದು ಇವರ ಕೆಲಸವಾಗಿದೆ.

(೩) ಹ॥ ಇಸ್ರಾಯಿಲ್:- ಪರಮಾತ್ಮನ ಆಜ್ಞೆಯಂತೆ ಸಕಲರ ಪ್ರಾಣಹರಣ ಮಾಡುವದು ಇವರ ಕೆಲಸವಾಗಿದೆ.

(೪) ಹ॥ ಇಸ್ರಾಫೀಲ್:- ಪ್ರಳಯಕಾಲವು ಸನ್ನಿಹಿತವಾದಾಗ, ಪರಮಾತ್ಮನ ಅಪ್ಪಣೆಯಂತೆ ಇವರು ಪ್ರಳಯ ಕಾಳಿಯನ್ನು ಊದುವರು. ಪ್ರಳಯ ಕಾಳಿಯು ಪ್ರಥಮವಾಗಿ ಊದಲ್ಪಟ್ಟಾಗ, ಅದರ ಭೀಕರತೆಯ

ಪರಿಣಾಮವಾಗಿ ಎಲ್ಲ ವಸ್ತುಗಳು ಛಿನ್ನವಿಚ್ಛಿನ್ನವಾಗುವವು; ಆದ್ದರಿಂದ ಬ್ರಹ್ಮಾಂಡವೆಲ್ಲವೂ ಲಯಹೊಂದುವದು. ದ್ವಿತೀಯ ಕಾಳಿಯು ಊದಲ್ಪಟ್ಟಾಗ, ಸಕಲ ಜೀವರಾಶಿಗಳು ಪುನರ್ಜನ್ಮವನ್ನು ಪಡೆದು, ಓಡುತ್ತ ಓಡುತ್ತ ಮೈದಾನೆ ಹಷ್ರದಲ್ಲಿ (ನ್ಯಾಯವಿಚಾರಣೆಯ ಸಮಯದಲ್ಲಿ ಎಲ್ಲ ಜೀವಿಗಳು ಬಂದು ನಿಲ್ಲುವ ಪಟಾಂಗಣದಲ್ಲಿ) ಬಂದು ನಿಲ್ಲುವವು.

ಶಿಷ್ಯ:— "ಪ್ರವಾದಿಗಳಲ್ಲಿ ಶ್ರದ್ಧೆಯನ್ನಿಡಬೇಕು" ಅಂದರೆ ಏನು?

ಗುರು:—ಜಗತ್ತಿನ ಆದಿಯಿಂದ ಆಗಿ ಹೋದಂಥ ಸಕಲ ಪ್ರವಾದಿಗಳಲ್ಲಿಯೂ ಶ್ರದ್ಧೆಯನ್ನಿಡಬೇಕು; ಮತ್ತು ಅವರ ಬಗ್ಗೆ ಪ್ರೀತಿ ಆದರ ಭಾವನೆಗಳನ್ನು ತಳೆಯಬೇಕು. ಇದೇ ರೀತಿ ಸಕಲ ದೇವಗ್ರಂಥಗಳಲ್ಲಿಯೂ ಶ್ರದ್ಧೆಯನ್ನಿಡಬೇಕು.

ಶಿಷ್ಯ:—ಪ್ರಾರಬ್ಧವೆಂದರೇನು?

ಗುರು:—ಪ್ರತಿ ಮಾನವನ ಆಗು ಹೋಗುಗಳ ಬಗ್ಗೆ ಪರಮಾತ್ಮನಿಗೆ ಪೂರ್ವಜ್ಞಾನವಿರುತ್ತದೆ. ಪರಮಾತ್ಮನ ಅಂದಾಜಿನಂತೆ ಮಾನವನ ಜೀವಿತದಲ್ಲಿಯ ಆಗು ಹೋಗುಗಳಿಗೆ "ಪ್ರಾರಬ್ಧ" ಎನ್ನುತ್ತಾರೆ. ಎಲ್ಲವೂ ಪ್ರಾರಬ್ಧದಂತೆ ನಡೆಯುವದಾದರೂ, ಮಾನವನ ಕರ್ಮಗಳಿಗೆ ಅನುಗುಣವಾಗಿ ಪ್ರಾರಬ್ಧವು ಬದಲಾಗುತ್ತ ಹೋಗುವದು; ಆದರೆ, ಪರಮಾತ್ಮನ ಇಚ್ಛೆ ಇಲ್ಲದೆ ಪ್ರಾರಬ್ಧವು ಬದಲಾಗಲಾರದು.

ಶಿಷ್ಯ:—"ಕಯಾಮತ್" ಅಂದರೆ ಏನು?

ಗುರು:—ಕಯಾಮತ್ ಅಂದರೆ, ಪ್ರಳಯದಿನ ಅಥವಾ ನ್ಯಾಯದಿನ. ಕಯಾಮತ್‌ದ ದಿವಸ ಇಡೀ ಬ್ರಹ್ಮಾಂಡವೆಲ್ಲವೂ ನಾಶವಾಗುವದಾದ್ದರಿಂದ, ಕಯಾಮತಕ್ಕೆ ಪ್ರಳಯದಿನ ಅನ್ನುತ್ತಾರೆ; ಮತ್ತು ಪ್ರಳಯವಾದ ನಂತರ ಪರಮಾತ್ಮನು ಸತ್ತ ಮಾನವರೆಲ್ಲರನ್ನೂ ಮತ್ತೊಮ್ಮೆ ಜೀವದುಂಬಿಸಿ ಎಬ್ಬಿಸಿ, ನ್ಯಾಯಾನ್ಯಾಯ ವಿಚಾರಣೆಯನ್ನು ಮಾಡಿ, ಅವರವರ ಕರ್ಮಗಳಿಗೆ ತಕ್ಕಂತೆ ಫಲಗಳನ್ನು ಕೊಡುವನಾದ್ದರಿಂದ, ಕಯಾಮತಕ್ಕೆ "ನ್ಯಾಯದಿನ" ಎಂತಲೂ ಎನ್ನುತ್ತಾರೆ.

—ಕಯಾಮತವು ಯಾವಾಗ ಬರುವದು?

ಗುರು:—ಕಯಾಮತವು ಯಾವಾಗಬರುವದೆಂಬುದು ಪರಮಾತ್ಮನ ಹೊರ್ತಾಗಿ ಮತ್ತಾರಿಗೂ ಗೊತ್ತಿರುವದಿಲ್ಲ. ಆದರೂ, ಕಯಾಮತದ ಮುಂಚಿತವಾಗಿ ಸನ್ನಿಹಿತವಾಗುವ ಪೂರ್ವ-ಚಿನ್ಹಗಳನ್ನು ಹ॥ ಮಹಮ್ಮದ ಪೈಗಂಬರರು ಸೂಚಿಸಿರುತ್ತಾರೆ. ಅವು ಯಾವವೆಂದರೆ:--

(೧) ಜಗತ್ತಿನಲ್ಲಿ ಅನ್ಯಾಯವು ಹೆಚ್ಚಾಗಿ, ಜನರು ಒಬ್ಬರಿನ್ನೊಬ್ಬರ ಸುಲಿಗೆ ನಡೆಯಿಸುವಾಗ.

(೨) ಗುರುಹಿರಿಯರಿಗೆ ಸಲ್ಲಬೇಕಾದ ಮಾನ-ಮರ್ಯಾದೆಗಳು ಕಿರಿಯರಿಂದ ದೊರೆಯದಾಗ.

(೩) ಪರಮಾತ್ಮನನ್ನು ಮರೆತು ಜನರು ನಾಸ್ತಿಕರಾದಾಗ.

(೪) ಉತ್ತಮರಿಗಿಂತ ಕೀಳರು ಮೇಲ್ಸ್ತರಗತಿಗೆ ಏರಿದಾಗ.

(೫) ತುಣುಕು ರೊಟ್ಟಿಗಾಗಿ ಮಾನವರು ನಾಯಿಗಳಂತೆ ಕಚ್ಚಾಡುವಾಗ.

(೬) ಹಿಂದಿನ ಮಹಾಪುರುಷರನ್ನೂ ಸತ್ಪುರುಷರನ್ನೂ ಜನರು ಹೀಯಾಳಿಸ ತೊಡಗುವಾಗ.

(೭) ನಿಸರ್ಗವನ್ನು ಜಯಿಸಲು ಮಾನವನು ಪ್ರಯತ್ನಿಸುವಾಗ.

(೮) ಸತ್ಯಕ್ಕಿಂತ ಅಸತ್ಯವೇ ಮೇಲಾಗಿ, ನೋಡಿದಲ್ಲೆಲ್ಲ ಪಾಪವೇ ಹೆಚ್ಚಾಗುವಾಗ.

ಶಿಷ್ಯ: ''ಈಮಾನೆ-ಮುಫಸ್ಸಲ''ದಲ್ಲಿ ಹೇಳಿದಂತೆ ನಿಷ್ಠೆ-ಶ್ರದ್ಧೆಗಳನ್ನು ಇಡದವರಿಗೆ ಏನೆನ್ನುತ್ತಾರೆ?

ಗುರು:—ಅಂಥವರಿಗೆ ಕಾಫಿರ್ ಎನ್ನುತ್ತಾರೆ.

ಶಿಷ್ಯ:—ಪರಮಾತ್ಮನ ಹೊರ್ತಾಗಿ ಇತರ ವಸ್ತುಗಳನ್ನು ಪೂಜಿಸುವವರಿಗೆ ಏನೆನ್ನುತ್ತಾರೆ?

ಗುರು:—ಅಂಥವರಿಗೆ ''ಮುಶ್ರಿಕ'' ಎನ್ನುತ್ತಾರೆ

# ೨ನೆಯ ಭಾಗ

## ಇಸ್ಲಾಮು ಧರ್ಮದ ಪಂಚ ಸ್ತಂಭಗಳು

ಶಿಷ್ಯ:—ಪ್ರತಿ ಮುಸಲ್ಮಾನನು ಮಾಡಲೇಬೇಕಾದ ಧಾರ್ಮಿಕ ವಿಧಿಗಳು ಎಷ್ಟಿರುತ್ತವೆ? ಮತ್ತು ಅವು ಯಾವವು?

ಗುರು:—ಅಂಥ ಕಡ್ಡಾಯವಾದ (ಫರ್ಜ) ಧಾರ್ಮಿಕ ವಿಧಿಗಳು ಐದು ಇರುತ್ತವೆ. ಪ್ರೌಢನಾದ ಪ್ರತಿ ಮುಸ್ಲಿಮನು ಅಥವಾ ಪ್ರೌಢಳಾದ ಪ್ರತಿ ಮುಸ್ಲಿಮಳು ಈ ಐದೂ ಧಾರ್ಮಿಕ ವಿಧಿಗಳನ್ನು ಮಾಡಲೇಬೇಕೆಂದು ಇಸ್ಲಾಮ್ ಧರ್ಮದ ಆದೇಶವಿದೆ. ಇವುಗಳನ್ನು ಅಥವಾ ಇವುಗಳಲ್ಲಿಯ ಯಾವದಾದರೊಂದನ್ನು ಮಾಡದಂಥವರು ಪಾಪಕ್ಕೆ ಗುರಿಯಾಗುವರು. ಅವು ಯಾವವೆಂದರೆ:—

(೧) ಕಲ್ಮಾ ಓದುವದು:—ಇಸ್ಲಾಮ್ ಧರ್ಮದ ಕಲ್ಮಾಗಳನ್ನು (ಸೂತ್ರಗಳನ್ನು) ಅಂತಃಕರಣಪೂರ್ವಕವಾಗಿ ಪಠಿಸಿ, ಅವುಗಳಲ್ಲಿ ದೃಢವಾದ ಶ್ರದ್ಧೆಯನ್ನಿಡುವದು.

(೨) ನಮಾಜ, ಅಂದರೆ, ಈಶ-ಪ್ರಾರ್ಥನೆ ಮಾಡುವದು

(೩) ರೋಜಾ, ಅಂದರೆ, ಉಪವಾಸವ್ರತವನ್ನಾಚರಿಸುವದು.

(೪) ಜಕಾತಕೊಡುವದು, ಅಂದರೆ, ಆಸ್ತಿಯಲ್ಲಿಯ ಕೆಲಭಾಗವನ್ನು ದೀನ ದರಿದ್ರರ ಉದ್ಧಾರಕ್ಕಾಗಿ ವಿನಿಯೋಗಿಸುವದು.

(೫) ಹಜ್ ಮಾಡುವದು, ಅಂದರೆ ಮಕ್ಕಾ ನಗರದಲ್ಲಿಯ ಪುಣ್ಯ ಕ್ಷೇತ್ರಗಳಿಗೆ ಭೆಟ್ಟಿಕೊಡುವದು.

### (೧) ಕಲ್ಮಾ

ಶಿಷ್ಯ:—ಇಸ್ಲಾಮು ಧರ್ಮದ ಸೂತ್ರಗಳು ಎಷ್ಟಿರುತ್ತವೆ? ಮತ್ತು ಅವು ಯಾವವು?

ಗುರು:— ಇಸ್ಲಾಮು ಧರ್ಮದ ಸೂತ್ರಗಳು (ಕಲ್ಮಾಗಳು) ಐದು ಇರುತ್ತವೆ. ಅವುಗಳಿಗೆ "ಪಂಚ-ಸೂತ್ರಗಳು" (ಪಂಜ-ಕಲ್ಮಾ) ಅನ್ನುತ್ತಾರೆ. ಅವು ಯಾವವೆಂದರೆ:—

(೧) ಕಲ್ಮಯೆ-ತೊಯ್ಯಬ್:—

"ಲಾ ಇಲಾಹಾ ಇಲ್ಲಲ್ಲಾಹ್, ಮುಹಮ್ಮದುರ್ರಸೂಲುಲ್ಲಾಹ್"

ಅನು॥ ಪೂಜಿಸಲ್ಪಡಲು ಅರ್ಹರಾದವರು ಪರಮಾತ್ಮನ ಹೊರತಾಗಿ ಮತ್ತಾರೂ ಇಲ್ಲ; ಮತ್ತು ಹ॥ ಮಹಮ್ಮದ ಪೈಗಂಬರರು ಪರಮಾತ್ಮನ ಪ್ರವಾದಿಗಳಿರುತ್ತಾರೆ.)

(೨) ಕಲ್ಮೆಯೆ-ಷಹಾದತ್:—

"ಅಷ್ಹದು ಅಲ್ ಲಾ ಇಲಾಹಾ ಇಲ್ಲಲ್ಲಾಹು, ವ ಅಹದಹು ಲಾ ಷರೀಕ ಲಹು; ವ ಅಷ್ಹದು ಅನ್ನ, ಮುಹಮ್ಮದನ್ ಅಬ್ದುಹೂ ವ ರಸೂಲುಹು"

ಅನು॥ ಪೂಜಿಸಲ್ಪಡಲು ಅರ್ಹರಾದವರು ಪರಮಾತ್ಮನ ಹೊರತಾಗಿ ಮತ್ತಾರೂ ಇರುವದಿಲ್ಲೆಂದೂ, ಪರಮಾತ್ಮನು ಏಕೈಕನಿದ್ದು ಅವನ ಸಂಘದವರು ಬೇರೆ ಯಾರೂ ಇರುವದಿಲ್ಲೆಂದೂ, ನಾನು ಸಾಕ್ಷಿನುಡಿಯುತ್ತೇನೆ; ಮತ್ತು ಹ॥ ಮಹಮ್ಮದ ಪೈಗಂಬರರು ನಿತ್ಯವು ನಾಗಿಯೂ ಪರಮಾತ್ಮನ ಭಕ್ತಾಗ್ರಣಿ ಇರುವರೆಂದೂ, ಅವರು ಪರಮಾತ್ಮನ ಪ್ರವಾದಿಯಾಗಿರುವರೆಂದೂ ನಾನು ಸಾಕ್ಷಿಯನ್ನೀಯುತ್ತೇನೆ)

(೩) ಕಲ್ಮಯೆ-ತಮ್ಜೀದ್:—

"ಸುಬ್ಹಾನಲ್ಲಾಹಿ ವಲ್ ಹಮ್ದುಲಿಲ್ಲಾಹಿ, ವ ಲಾ ಇಲಾಹಾ ಇಲ್ಲಲ್ಲಾಹು, ವಲ್ಲಾಹು ಅಕ್ಬರ್, ವ ಲಾಹೌಲ ವ ಲಾಕುವ್ವತ, ಇಲ್ಲಾ ಬಿಲ್ಲಾಹಿಲ್ ಅಲಿಯ್ಯಿಲ್-ಅಝೀಮ್"

ಅನು॥ ಪರಮಾತ್ಮನು ಮಹಾ ಪವಿತ್ರನಿರುವನು ಮತ್ತು ಸಕಲಸ್ತುತಿಗಳಿಗೆಲ್ಲ ಅರ್ಹನಾಗಿರುವನು; ಪೂಜಿಸಲ್ಪಡಲು, ಅತನ ಹೊರತಾಗಿ ಮತ್ತಾರೂ ಅರ್ಹರಿರುವದಿಲ್ಲ; ಮತ್ತು ಅವನು ಬಹು ದೊಡ್ಡವನಿರುವನು ಮಹಾಮಹಿಮನೂ, ಎಲ್ಲರಿಗಿಂತ ಹಿರಿಯವನೂ ಆದ ಪರಮಾತ್ಮನ ಶಕ್ತಿ ಸಾಮರ್ಥ್ಯಗಳ ಹೊರತಾಗಿ ಮತ್ತಾವ ಶಕ್ತಿ ಸಾಮರ್ಥ್ಯಗಳಿಲ್ಲ.)

(೪)

"ಲಾ ಇಲಾಹಾ ಇಲ್ಲಲ್ಲಾಹು, ವ್ಹ ದಹು ಲಾ ಷರೀಕ ಲಹು, ಲಹುಲ್ಮುಲ್ಕು ವ ಲಹುಲ್‌ಹಮ್ದು, ಯ್ಹುಯೀ ವ ಯುಮೀತು, ಬಿ ಯದಿಹಿಲ್ ಖೈರ್+ವಹುವ ಅಲಾ ಕುಲ್ಲಿ ಷೈಯಿನ್ ಕದೀರ್"

ಅನು॥ ಪರಮಾತ್ಮನ ಹೊರ್ತಾಗಿ ಮತ್ತಾರೂ ಪೂಜಿತರಿಲ್ಲ; ಅವನು ಏಕೈಕನಿರುವನು ಮತ್ತು ಆವನಂಥವರು ಮತ್ತಾರಿಲ್ಲ; ಎಲ್ಲ ಒಡೆತನವೂ ಆತನಿಗೇ ಸೇರಿದೆ (ಅಂದರೆ, ಎಲ್ಲವೂಗಳಿಗೂ ಆತನೇ ಒಡೆಯನು); ಸಕಲ ಸ್ತುತಿಗಳೆಲ್ಲ ಆತನಿಗಾಗಿಯೇಇವೆ; ಜೀವಕಳೆಯನ್ನು ತುಂಬುವವನೂ ಆವನೇ, ಮತ್ತು ಪ್ರಾಣಹರಣ ಮಾಡುವವನೂ ಆವನೇ! ಎಲ್ಲವೂ ಅತನ ಕೈಯಲ್ಲಿಯೇ!! ಮತ್ತು ಎಲ್ಲವುಗಳ ಮೇಲೆ ಅವನ ಪ್ರಭುತ್ವವಿದೆ (ಅಂದರೆ, ಎಲ್ಲವನ್ನೂ ಅವನು ಮಾಡಬಲ್ಲವನಾಗಿದ್ದಾನೆ).

## (೫) ಕಲ್ಮಯೆ-ರದ್ದೆ-ಕುಫ್ರ:—

"ಅಲ್ಲಾಹುಮ್ಮಾ, ಇನ್ನೀ ಅಊಜುಬಿಕ ಮಿನನ್ ಉಷ್ರಿಕಬಿಕ ಷೈಅಂವ್, ವ ಅನಾ ಅಲಮು ಬಿಹಿ; ವ ಅಸ್ತಘ್ಫಿರುಕ ಲಿಮಾ ಅಲಮು ಬಿಹಿ+ತುಬ್ತು ಅನ್ಹು, ವ ತಬರ್ರಾತು ಮಿನಲ್ ಕುಫ್ರಿ ವಷ್ಷಿರ್ಕಿ, ವಲ್ ಮಆಸಿ ಕುಲ್ಲಿಹಾ; ವ ಅಸ್ಲಮ್ತು ವ ಆಮಂತು; ವ ಅಕೂಲು, ಲಾ ಇಲಾಹಾ ಇಲ್ಲಲ್ಲಾಹು ಮುಹಮ್ಮದುರ್ರಸೂಲುಲ್ಲಾಹ್"

ಅನು॥ ಹೇ ಪರಮಾತ್ಮಾ ತಿಳಿದೂ ತಿಳಿದೂ ಯಾವದಾದರೊಂದು ವಸ್ತುವನ್ನು (ಅಥವಾ ವ್ಯಕ್ತಿಯನ್ನು) ನಿನ್ನ ಸರಿಯೆಂದು (ಅಂದರೆ ನಿನಗೆ ಸರಿಸಮಾನವಾದದ್ದೆಂದು) ನಾನು ಭ್ರಾಂತಿಸದಂತೆ ನನಗೆ ರಕ್ಷಣೆಯನ್ನು ನೀಡು; ಮತ್ತು ತಿಳಿಯದಲೆ ನಾನು ಹಾಗೆ ಮಾಡಿದ್ದಾದರೆ ನನ್ನನ್ನು ಕ್ಷಮಿಸು! ಅಂಥವುಗಳ ವಿಷಯವಾಗಿ ನನಗೆ ಪಾಶ್ಚಾತ್ತಾಪವಾಗಿದೆ. ಎಲ್ಲ ತರದ ಪಾಪಕೃತಿಗಳಿಂದಲೂ ಅವಿಧೇಯತೆಯಿಂದಲೂ (ಕುಫ್ರದಿಂದ) ನಾನು ಬೇಜಾರಗೊಂಡವನಾಗಿದ್ದೇನೆ; ನಿನಗೇ ವಿಧೇಯನಾಗಿದ್ದೇನೆ; ನಿನ್ನಲ್ಲಿಯೇ ಶ್ರದ್ಧೆಯನ್ನಿಟ್ಟಿದ್ದೇನೆ; ಮತ್ತು "ಪರಮಾತ್ಮನ ಹೊರ್ತಾಗಿ ಮತ್ತಾರೂ ಪೂಜಿತರಿಲ್ಲ; ಹ॥ ಮುಹಮ್ಮದರು ದೇವಪ್ರವಾದಿಯಾಗಿರುವರು" ಎಂಬುವದನ್ನು ಸಾರಿ ಸಾರಿ ಹೇಳುತ್ತೇನೆ.)

## (೨) ನಮಾಜ

ಶಿಷ್ಯ:—ನಮಾಜ ಅಂದರೆ ಏನು? ಯಾವ ರೀತಿಯಾಗಿ ಅದನ್ನು ಆಚರಿಸಬೇಕು?

ಗುರು:—ನಮಾಜವೆಂದರೆ, ಪರಮಾತ್ಮನನ್ನು ಪ್ರಾರ್ಥಿಸುವ ಒಂದು ವಿಧಾನವು ಅಥವಾ ಪದ್ಧತಿಯು. ಕುರಾನ ಗ್ರಂಥದಲ್ಲಿ ಈ ಪದ್ಧತಿಯ ವಿವರಣೆ ಇರುತ್ತದೆ; ಮತ್ತು ಹ|| ಮಹಮ್ಮದ ಪೈಗಂಬರರು ಈ ವಿಧಾನವನ್ನು ಆಚರಿಸಿ, ಮುಸಲ್ಮಾನರಿಗಾಗಿ ತೋರಿಸಿಕೊಟ್ಟಿದ್ದಾರೆ. ಆ ವಿಧಾನದಂತೆ ಪರಮಾತ್ಮನನ್ನು ಪ್ರಾರ್ಥಿಸುವದಕ್ಕೆ "ನಮಾಜ" ಅನ್ನುತ್ತಾರೆ. ಪೈಗಂಬರರು ತೋರಿಸಿದ ಪದ್ಧತಿಯಂತೆಯೇ ಎಲ್ಲರೂ ನಮಾಜ ಮಾಡತಕ್ಕದ್ದು.

ಶಿಷ್ಯ:—ನಮಾಜದ ವಿಧಾನವನ್ನು ವಿವರಿಸಿ ಹೇಳುವಿರಾ?

ಗುರು:—ಮಡಿವಂತಿಯುಳ್ಳವರಾಗಿ, ಸ್ವಚ್ಛವಾದ ಉಡಿಗೆತೊಡಿಗೆಗಳನ್ನು ತೊಟ್ಟು, ಸ್ವಚ್ಛವಾದ ನೀರಿನಿಂದ ಕೈಕಾಲು ಮುಖಗಳನ್ನು ತೊಳೆದುಕೊಂಡು (ವಜೂ ಮಾಡಿ), ಮಶೀದೆಯಲ್ಲಿಯ ಅಥವಾ ಮನೆಯಲ್ಲಿಯ ಅಥವಾ ಮೈದಾನದಲ್ಲಿಯ ಸ್ವಚ್ಛವಾದ ಸ್ಥಳದಲ್ಲಿ 'ಕಾಬಾ'ದ ದಿಕ್ಕಿನೆಡೆ ಮುಖಮಾಡಿ ಎದ್ದು ನಿಂತು, ಪರಮಾತ್ಮನು ಸಮ್ಮುಖದಲ್ಲಿಯೇ ಇದ್ದಾನೆ ಎಂಬ ಭಾವನೆ-ಯನ್ನು ಮನದಲ್ಲಿ ತಳೆದು, ಕುರಾನವನ್ನು ಪಠಿಸುತ್ತ ಮತ್ತು ಪರಮಾತ್ಮನ ಗುಣಗಾನಗಳನ್ನು ಮಾಡುತ್ತ, ಆ ದಯಾಘನನ ಸಮ್ಮುಖದಲ್ಲಿ ಮೊದಲು ನಮ್ರತೆಯಿಂದ ಬಾಗಿ, ಆ ಮೇಲೆ ಅನನ್ಯಭಾವದಿಂದ ಪರಮಾತ್ಮನ ಪಾದಾರವಿಂದಗಳಿಗೆ ಸಾಷ್ಟಾಂಗವೆರಗಬೇಕು. ಈ ರೀತಿಯಾಗಿ, ಸರ್ವಶ್ರೇ-ಷ್ಠನಾದಸಪರಮಾತ್ಮನ ಹಿರಿಮೆಯ ಮುಂದೆ, ಮಾನವನು ತನ್ನ ಕಿರಿಮೆಯನ್ನು ತೋರಿಸುವಂಥ ವಿಧಾನದ ಪ್ರಾರ್ಥನೆಗೆ 'ನಮಾಜ' ಅನ್ನುತ್ತಾರೆ.

ಶಿಷ್ಯ:— ಮನೆಯಲ್ಲಿ ನಮಾಜ ಮಾಡುವದು ಉತ್ತಮವೋ ಅಥವಾ ಮಶೀದೆಯಲ್ಲಿ ಮಾಡುವದು ಉತ್ತಮವೋ?

ಗುರು:— ಯಾವ ಸ್ಥಳದಲ್ಲಿ ಮಾಡಿದರೂ ನಮಾಜವು ಪೂರ್ತಿಯಾಗುತ್ತದೆ. ಆದರೆ ಮಶೀದೆಯಲ್ಲಿ ಮಾಡುವದರಿಂದ ಹೆಚ್ಚು ಪುಣ್ಯವು ದೊರೆಯುತ್ತದೆ; ಮತ್ತು ಪರಮಾತ್ಮನು ಹೆಚ್ಚು ಸಂತುಷ್ಟನಾಗುತ್ತಾನೆ.

ಶಿಷ್ಯ:— ಮಶೀದೆಯಲ್ಲಿ ನಮಾಜ ಮಾಡುವದರಿಂದ ಪರಮಾತ್ಮನು ಹೆಚ್ಚು ಸಂತುಷ್ಟನಾಗುತ್ತಾನೆ ಅಂತಾ ಹೇಳಿದಿರಿ ಅಲ್ಲವೇ? ಮಶೀದೆಯಲ್ಲಿ ನಮಾಜ ಮಾಡುವಾಗ, ಪರಮಾತ್ಮನು ತೀರ ಸಮ್ಮುಖದಲ್ಲಿ ಇರುವನೇನು?

ಗುರು:— ಅಲ್ಲಲ್ಲ! ಹಾಗೇನೂ ಅಲ್ಲ! ಪರಮಾತ್ಮನು ಸರ್ವವ್ಯಾಪಿಯಾಗಿರುವನಾದ್ದರಿಂದ, ಎಲ್ಲಿ ನಮಾಜ ಮಾಡಿದರೂ ಸಹ ಪರಮಾತ್ಮನು ಸಮ್ಮುಖದಲ್ಲಿ ಇದ್ದೇ ಇರುತ್ತಾನೆ. ಪರಮಾತ್ಮನೇನೂ ಮಶೀದೆಯ ಒಂದು ಮೂಲೆಯನ್ನು ಹಿಡಿದು ಕುಳಿತಿಲ್ಲ! ಆದರೂ, ಮಶೀದೆಯಲ್ಲಿ ನಮಾಜ ಮಾಡುವದು ಉತ್ತಮವು. ಯಾಕೆಂದರೆ, ಹ|| ಮುಹಮ್ಮದ ಪೈಗಂಬರರು ಹಾಗೆ ವಿಧಿಸಿದ್ದಾರೆ. ಇದಲ್ಲದೆ, ಮಶೀದೆಯಲ್ಲಿ ನಮಾಜ ಮಾಡುವದರಿಂದ, ಅದೆಷ್ಟೋ ಲೌಕಿಕ ಲಾಭಗಳು ಲಭ್ಯವಾಗುತ್ತವೆ.

ಶಿಷ್ಯ:— ಮಶೀದೆ ಅಂತಾ ಯಾವದಕ್ಕೆ ಅನ್ನಬೇಕು?

ಗುರು:— ಯಾವ ಮನೆಯು ಸಾಮೂಹಿಕ ಪ್ರಾರ್ಥನೆಗಾಗಿಯೇ ಗೊತ್ತು ಮಾಡಲ್ಪಟ್ಟಿರುತ್ತದೆಯೋ, ಮತ್ತು ಯಾವದರಲ್ಲಿ ಸಾಮೂಹಿಕ ಪ್ರಾರ್ಥನೆಗಳು (ನಮಾಜೆ-ಜಮಾಅತ್) ನೇಮಿತವಾಗಿ ಆಚರಿಸಲ್ಪಡು-ವವೋ, ಅಂಥ ಮನೆಗೆ ಮಶೀದೆ ಅನ್ನುತ್ತಾರೆ. ಮಶೀದೆ ಅಂತಾ ಗೊತ್ತುಮಾಡಲ್ಪಟ್ಟ ಕಟ್ಟಡವನ್ನು ಇತರ ಕೆಲಸಗಳಿಗಾಗಿ ಉಪಯೋಗಿಸಬಾರದು.

ಶಿಷ್ಯ:—ಮಶೀದೆಯ ಕಟ್ಟಡವು "ಇಂತೆಯೇ ಇರಬೇಕು" ಎಂಬ ನೇಮಗಳೇನಾದರೂ ಇರುತ್ತವೆಯೋ?

ಗುರು:— ಇಲ್ಲ, ಮಶೀದೆಯ ಕಟ್ಟಡವು "ಹೀಗೆಯೇ ಇರಬೇಕು" ಎಂಬ ನೇಮಗಳು ಇರುವದಿಲ್ಲ. ಆದರೆ, ಪರಸ್ಥಳದವರಿಗೆ "ಇದು ಮಶೀದೆ" ಎಂಬುದು ಗೊತ್ತಾಗಲೆಂಬ ಉದ್ದೇಶದಿಂದ, ಕಟ್ಟಡದ ನಾಲ್ಕೂ ಮೂಲೆಗಳ ಮೇಲೆ ಮಿನಾರಗಳನ್ನು (ಸ್ತಂಭಗಳನ್ನು) ಕಟ್ಟುತ್ತಾರೆ.

ಶಿಷ್ಯ:—ಮಶೀದೆಯಲ್ಲಿ ಏನೇನು ಮಾಡಬೇಕು ಮತ್ತು ಏನೇನು ಮಾಡಬಾರದು?

ಗುರು:—ಮಶೀದೆಯಲ್ಲಿ ನಮಾಜ ಮಾಡಬೇಕು, ಇಲ್ಲವೆ ಕುರಾನ-ಪಠಣೆಯನ್ನು ಮಾಡಬೇಕು, ಇಲ್ಲವೆ ಪರಮಾತ್ಮನ ನಾಮಸ್ಮರಣೆಯನ್ನು

ಮಾಡುತ್ತ ನಮ್ರತೆಯಿಂದ ಕುಳಿತುಕೊಂಡಿರಬೇಕು. ಇತರರ ಕೂಡ ಮಾತಾಡುವದಾದರೆ ಸಾವಕಾಶವಾಗಿ ಮಾತನಾಡಬೇಕು. ಧಾರ್ಮಿಕ ವಿಷಯಗಳನ್ನು ಮತ್ತು ಸಮಾಜಕ್ಕೆ ಸಂಬಂಧಿಸಿದ ಯೋಗ್ಯ ಪ್ರಶ್ನೆಗಳನ್ನು ಮಶೀದೆಯಲ್ಲಿ ಚರ್ಚಿಸಬಹುದು. ಆದರೆ, ಆಟಪಾಟವಾಡುವದನ್ನೂ, ಜಗಳಾಡುವದನ್ನೂ, ಹೇಸಿ ಸಂಭಾಷಣೆಗಳನ್ನೂ, ಒಬ್ಬರಿನ್ನೊಬ್ಬರ ನಿಂದೆಯನ್ನೂ, ಅಧರ್ಮಿಕವಾದ ಯಾವದೇ ಕೆಲಸವನ್ನೂ ಮತ್ತು ಗುಪ್ತ ಕಾರಸ್ಥಾನಗಳನ್ನೂ ಮಶೀದೆಯಲ್ಲಿ ಮಾಡಬಾರದು.

ಶಿಷ್ಯ:—ಸಾಮೂಹಿಕ ಪ್ರಾರ್ಥನೆ ಅಂದರೆ ಏನು?

ಗುರು:—ಬಹು ಜನರು ಕೂಡಿ ಸಾಮೂಹಿಕವಾಗಿ ಪ್ರಾರ್ಥನೆಯನ್ನು ಅರ್ಪಿಸುವದಕ್ಕೆ "ಸಾಮೂಹಿಕ-ಪ್ರಾರ್ಥನೆ" (ನಮಾಜೆ-ಜಮಾಅತ್) ಅನ್ನುತ್ತಾರೆ. ನಮಾಜಕ್ಕಾಗಿ ಕೂಡಿದ ಜನರೆಲ್ಲರ ಅನುಮತಿಯ ಮೇರೆಗೆ ಅವರಲ್ಲಿಯ ಯಾವನಾದರೊಬ್ಬನು ಪ್ರಾರ್ಥನೆಯ ಮುಖಂಡತ್ವವನ್ನು ವಹಿಸುವನು; ಮತ್ತು ಉಳಿದವರು ಅವನ ಹಿಂದೆ ಸಾಲಾಗಿ ಒಬ್ಬರಿನ್ನೊಬ್ಬರ ಮಗ್ಗಲಕ್ಕೆನಿಂತು, ಅವನ ಅಂಕಿತಕ್ಕೆ ಒಳಗಾಗುವರು

ಶಿಷ್ಯ:—ಸಾಮೂಹಿಕ ಪ್ರಾರ್ಥನೆಯಲ್ಲಿ ಎಲ್ಲರಿಗಿಂತಲೂ ಮುಂದೆ ನಿಂತು ನಮಾಜ ಮಾಡಿಸುವವನಿಗೆ ಏನೆನ್ನುತ್ತಾರೆ? ಮತ್ತು ಹಿಂದೆ ನಿಂತ ವರಿಗೆ ಏನೆನ್ನುತ್ತಾರೆ?

ಗುರು:—ಮುಂದೆ ನಿಂತು ನಮಾಜ ಮಾಡಿಸುವವನಿಗೆ "ಇಮಾಮ್" (ಮುಖಂಡ) ಅನ್ನುತ್ತಾರೆ; ಮತ್ತು ಹಿಂದೆ ನಿಂತವರಿಗೆ "ಮುಕ್ತದಿ" (ಹಿಂಬಾಲಕರು) ಅನ್ನುತ್ತಾರೆ.

ಶಿಷ್ಯ:—ಕೂಡಿದ ಜನರಲ್ಲಿಯ ಯಾವನಾದರೊಬ್ಬನು ಪ್ರಾರ್ಥನೆಯ "ಇಮಾಮತ್" (ಮುಖಂಡತ್ವ)ವನ್ನು ವಹಿಸಬಲ್ಲನೋ?

ಗುರು:—ಇಲ್ಲ. ಸಿಕ್ಕ ಸಿಕ್ಕವರು ಇಮಾಮ್ (ಮುಖಂಡ) ಆಗಲಾರರು. ಇಮಾಮ್ ಆಗಲಿಕ್ಕೆ ಕೆಲವು ಶರ್ತುಗಳಿರುತ್ತವೆ. ಆ ಶರ್ತುಗಳಿಗೆ ಅನುಗುಣವಾಗಿ ಇರುವಂಥವನೇ ಇಮಾಮ್ ಆಗಬಲ್ಲನು. ಇಮಾಮನಾಗತಕ್ಕವನು ಹೇಗೆ ಇರಬೇಕೆಂದರೆ:—

(೧) ನಮಾಜದ ನೇಮುಗಳನ್ನೆಲ್ಲ ಚನ್ನಾಗಿ ಬಲ್ಲವನಿರಬೇಕು.

(೨) ಅವಯುವಹೀನನೂ ಬುದ್ಧಿಹೀನನೂ (ಭ್ರಮಿಷ್ಟ) ಇರತಕ್ಕದ್ದಲ್ಲ.

(೩) ಪ್ರೌಢನಾಗಿರಬೇಕು.

(೪) ನಮಾಜ, ರೋಜಾ ಮೊದಲಾದ ಧಾರ್ಮಿಕ ವಿಧಿಗಳನ್ನೆಲ್ಲ ನೇಮಿತವಾಗಿ ಆಚರಿಸುವವನಾಗಿರಬೇಕು.

(೫) ಆಚಾರ ವಿಚಾರಗಳಲ್ಲಿ ಇಸ್ಲಾಮೀ ತತ್ವಗಳಿಗೆ ಹೊಂದಿಕೊಂಡ-ವನಿರಬೇಕು.

(೬) ನಮಾಜ ಮಾಡುವದಕ್ಕಾಗಿ ಕೂಡಿದಂಥ ಜನರು—ಕನಿಷ್ಟ ಪಕ್ಷಕ್ಕೆ ಅರ್ಧಕ್ಕಿಂತ ಹೆಚ್ಚು ಜನರು—ಇಮಾಮನೆಂದು ಅವನನ್ನು ಮನ್ನಿಸಬೇಕು.

ಶಿಷ್ಯ:—ಮೇಲಿನ ಶರ್ತುಗಳಿಗೆ ಅನುಗುಣವಾಗಿ ಇರುವಂಥವನು, ಕೂಡಿದ ಜನರಲ್ಲಿ ಯಾವನೂ ಇಲ್ಲದಿದ್ದರೆ, ಇಮಾಮತ್ ಯಾರು ಮಾಡಬೇಕು?

ಗುರು:—ಇದ್ದವರಲ್ಲಿಯೇ ಹೆಚ್ಚು ಯೋಗ್ಯನಾದಂಥವನನ್ನು ಆರಿಸಿಕೊಳ್ಳಬೇಕು.

ಶಿಷ್ಯ:—ಕೂಡಿದ ಜನರಲ್ಲಿಯ ಯಾವನಾದರೊಬ್ಬನಿಗೆ ಅಥವಾ ಕೆಲವರಿಗೆ, ಇಮಾಮನಾಗುವವನ ಇಮಾಮತ್ (ಮುಖಂಡತ್ವವು) ಮಾನ್ಯವಿಲ್ಲದಿದ್ದರೆ, ಅವನು ಅಥವಾ ಅವರು ಏನು ಮಾಡಬೇಕು?

ಗುರು:—ಜಮಾಅತದವರು (ಕೂಡಿದ ಜನರು) ಚುನಾಯಿಸಿದ ಇಮಾಮನ ಇಮಾಮತವನ್ನು ವಿನಾಕಾರಣವಾಗಿ ಅಥವಾ ವೈಯಕ್ತಿಕ ಕಾರಣಗಳಿಗಾಗಿ ಯಾರೂ ವಿರೋಧಿಸತಕ್ಕದ್ದಲ್ಲ ಎಂದು ಇಸ್ಲಾಮು ಧರ್ಮದ ಆದೇಶವಿದೆ. ಆದರೆ ಸಕಾರಣಗಳಿಗಾಗಿ, ಇಮಾಮನಾಗುವವನ ಇಮಾ-ಮತ್ ಯಾವನಿಗಾದರೂ ಅಮಾನ್ಯವಿದ್ದರೆ, ಅಂಥವನು ಅಥವಾ ಅಂಥವರು ಜಮಾಅತದಿಂದ (ಪ್ರಾರ್ಥನಾ ಸಮೂಹದಿಂದ) ಹಿಂದೆ ಸರಿದು, ಒಬ್ಬೊಬ್ಬರಾಗಿಯೇ ತಮ್ಮ ತಮ್ಮ ನಮಾಜ ಮಾಡಿಕೊಳ್ಳಬೇಕು; ಆದರೆ, ಒಂದೇ ಸ್ಥಳದಲ್ಲಿ ಎರಡನೇ ಜಮಾಅತ್ ಮಾಡಿಕೊಳ್ಳಲೇಬಾರದು. ಎರಡನೇ

ಜಮಾಅತ್ ಮಾಡಿಕೊಳ್ಳಲೇಬೇಕಾದ ಪ್ರಸಂಗವಿದ್ದಾಗ ಮಾತ್ರ (ಅಂದರೆ,-ನಮಾಜೆ-ಜುಮ್ಮಾ ಮತ್ತು ನಮಾಜೆ-ಈದೈನಗಳ ಪ್ರಸಂಗವಿದ್ದಾಗ ಮಾತ್ರ) ಅಂಥವರು ಬೇರೆ ಮತ್ತಾವದೇ ಸ್ಥಳಕ್ಕೆ ಹೋಗಿ, ಅಲ್ಲಿ ತಮ್ಮದೊಂದು ಜಮಾಅತ್ ಮಾಡಿಕೊಳ್ಳಬೇಕು.

ಶಿಷ್ಯ:—ಸಾಮೂಹಿಕ ಪ್ರಾರ್ಥನೆಯನ್ನು ಮಾಡುವದಕ್ಕಾಗಿ ಕನಿಷ್ಟ ಎಷ್ಟು ಜನರು ಇರಬೇಕು?

ಗುರು:—ಕನಿಷ್ಟ ಇಬ್ಬರು ಇರಬೇಕು; ಒಬ್ಬನು ಇಮಾಮ್ ಮತ್ತು ಒಬ್ಬನು ಮುಕ್ತದಿ. ಆದರೆ ನಮಾಜೆ-ಜುಮ್ಮಾ ಮತ್ತು ನಮಾಜೆ-ಈದೈನಗಳ ಸಲುವಾಗಿ ಕನಿಷ್ಟಪಕ್ಷಕ್ಕೆ ನಾಲ್ವರು ಇರಬೇಕು; ಒಬ್ಬ ಇಮಾಮ ಮತ್ತು ಮೂವರು ಮುಕ್ತದಿ (ಹಿಂಬಾಲಕರು).

ಶಿಷ್ಯ:—ಒಬ್ಬಂಟಿಗನಾಗಿ ನಮಾಜ ಮಾಡುವವನಿಗೆ ಏನೆನ್ನುತ್ತಾರೆ?

ಗುರು:—ಅಂಥವನಿಗೆ "ಮುನ್ಫರಿದ್" (ಒಂಟಿಗ) ಅನ್ನುತ್ತಾರೆ.

ಶಿಷ್ಯ:—ದಿವಸಕ್ಕೆ ಎಷ್ಟು ಸಾರೆ ನಮಾಜ ಮಾಡಬೇಕಾಗುತ್ತದೆ?

ಗುರು:—ಪ್ರತಿ ಮುಸಲ್ಮಾನನು ಪ್ರತಿ ದಿವಸ ಐದು ಸಾರೆ ನಮಾಜ ಮಾಡಲೇಬೇಕೆಂದು ಇಸ್ಲಾಮ ಧರ್ಮದ ಆದೇಶವಿರುತ್ತದೆ. ಪ್ರತಿ ನಮಾಜದ ವೇಳೆಯು ನೇಮಿತವಾಗಿದೆ. ನೇಮಿತವಾದ ವೇಳೆಗೆ ಸರಿಯಾಗಿ ಆ ಆ ನಮಾಜಗಳನ್ನು ಮಾಡಬೇಕಾಗುತ್ತದೆ. ಈ ಐದೂ ನಮಾಜಗಳಿಗೆ "ಫರ್ಜ-ನಮಾಜ" (ಕಡ್ಡಾಯದ-ಪ್ರಾರ್ಥನೆ) ಅನ್ನುತ್ತಾರೆ.

ಶಿಷ್ಯ:—ಈ ಐದೂ ಫರ್ಜ-ನಮಾಜಗಳ ಹೆಸರುಗಳೇನು? ಮತ್ತು ನೇಮಿತವಾದ ವೇಳೆಗಳಾವವು?

ಗುರು:—ಈ ಐದೂ ಫರ್ಜ-ನಮಾಜಗಳ ಹೆಸರುಗಳು ಮತ್ತು ನೇಮಿತವಾದ ವೇಳೆಗಳು ಇಂತಿರುವವು:—

(೧) **ನಮಾಜೆ-ಫಜ್ರ** (ಪ್ರಾತಃಕಾಲದ ಪ್ರಾರ್ಥನೆ):— ಸೂರ್ಯೋದಯಕಿಂತ ಅರ್ಧ ತಾಸು ಮೊದಲು ಈ ಪ್ರಾರ್ಥನೆಯನ್ನು ಪ್ರಾರಂಭಿಸಬೇಕು.

(೨) **ನಮಾಜೆ-ಝೊಹರ್** (ಮಧ್ಯಾಹ್ನದ ಪ್ರಾರ್ಥನೆ):—ಮಧ್ಯಾಹ್ನ ೧ ಘಂಟೆಯಿಂದ ೨॥ ಘಂಟೆಯ ವರೆಗೆ ಈ ನಮಾಜದ ವೇಳೆಯು ಇರುತ್ತದೆ

(೩) **ನಮಾಜೆ-ಅಸ್ರ** (ಸಂಧ್ಯಾಕಾಲದ ಪ್ರಾರ್ಥನೆ):-ಸೂರ್ಯಾಸ್ತ ವಾಗುವದಕ್ಕಿಂತ ಎರಡು ಅಥವಾ ದೀಡು ತಾಸು ಮುಂಚಿತವಾಗಿ ಈ ಪ್ರಾರ್ಥನೆಯನ್ನು ಅರ್ಪಿಸಬೇಕು.

(೪) **ನಮಾಜೆ-ಮಗ್ರಿಬ್** (ಸೂರ್ಯಾಸ್ತಸಮಯದ ಪ್ರಾರ್ಥನೆ):-ಸೂರ್ಯಾಸ್ತವಾಗುತ್ತಲೇ ಈ ಪ್ರಾರ್ಥನೆಯನ್ನು ಆರಂಭಿಸಬೇಕು.

(೫) **ನಮಾಜೆ-ಇಷಾ** (ರಾತ್ರಿಯ ಪ್ರಾರ್ಥನೆ):- ಸೂರ್ಯಾಸ್ತವಾದ ನಂತರ, ೨ ರಿಂದ ೩ ತಾಸುಗಳ ಮಧ್ಯ ಈ ಪ್ರಾರ್ಥನೆಯನ್ನು ಅರ್ಪಿಸಬೇಕು.

ಶಿಷ್ಯ:—ಮೇಲೆ ಹೇಳಿದ ಪ್ರತಿನಿತ್ಯದ ಐದು ನಮಾಜಗಳ ಹೊರ್ತಾಗಿ ಮತ್ತೂ ಬೇರೆ ನಮಾಜಗಳು ಇರುತ್ತವೆ ಏನು?

ಗುರು—ಅಹುದು ಮತ್ತೂ ಇರುತ್ತವೆ. ಅವು ಯಾವವೆಂದರೆ:—

(೧) "ನಮಾಜೆ-ಜುಮ್ಮಾ" (ಶುಕ್ರವಾರದ ಪ್ರಾರ್ಥನೆ):-ಪ್ರತಿ ಶುಕ್ರ-ವಾರದ ದಿವಸ ಮಧ್ಯಾಹ್ನ ೧ ಘಂಟೆಗೆ ಈ ನಮಾಜದ ವೇಳೆಯು ಪ್ರಾರಂಭ ವಾಗುತ್ತದೆ. ಇದಾದರೂ ಫರ್ಜ-ನಮಾಜ (ಕಡ್ಡಾಯವಾದ ಪ್ರಾರ್ಥನೆ) ಆಗಿರುತ್ತದೆ. ಈ ನಮಾಜವು ಸಾಮೂಹಿಕವಾಗಿಯೇ ಆಚರಿಸಲ್ಪಡುತ್ತದೆ. ಒಬ್ಬೊಂಟಿಗರಾಗಿ ಈ ನಮಾಜವನ್ನು ಮಾಡಬಾರದು. ಇಸ್ಲಾಮೀ ಧರ್ಮ-ದಲ್ಲಿ ಈ ಶುಕ್ರವಾರದ ಪ್ರಾರ್ಥನೆಗೆ ಬಹಳೇ ಮಹತ್ವವಿರುತ್ತದೆ. ಪ್ರತಿ ಮುಸಲ್ಮಾನನು ಶುಕ್ರವಾರದ ಪ್ರಾರ್ಥನೆಯಲ್ಲಿ ಭಾಗವಹಿಸಲೇಬೇಕೆಂದು ಇಸ್ಲಾಮ್ ಧರ್ಮದ ಆದೇಶವಿದೆ. ಶುಕ್ರವಾರದ ಪ್ರಾರ್ಥನೆಯನ್ನು ಅರ್ಪಿಸಿದರೆ, ಆ ದಿವಸದ ಝೊಹರ್-ನಮಾಜವನ್ನು ಅರ್ಪಿಸುವ ಅವಶ್ಯಕತೆಯಿಲ್ಲ. ಆದರೆ, ಯಾವದೇ ಅನಿವಾರ್ಯ ಕಾರಣದಿಂದ ಶುಕ್ರವಾರದ ಪ್ರಾರ್ಥನೆಯು ತಪ್ಪಿಹೋದರೆ (ಅಂದರೆ ಶುಕ್ರವಾರದ ಸಾಮೂಹಿಕ ಪ್ರಾರ್ಥನೆಯಲ್ಲಿ ಭಾಗ ವಹಿಸುವದು ಶಕ್ಯವಾಗದಿದ್ದರೆ), ಪ್ರತಿನಿತ್ಯದಂತೆ ಝೊಹರ್-ನಮಾಜವನ್ನು ಅರ್ಪಿಸಬೇಕಾಗುತ್ತದೆ.

(೨) ನಮಾಜೆ-ಈದುಲ್ ಫಿತ್ರ:-ರಮ್ಜಾನ-ಹಬ್ಬದ ದಿವಸ ಮುಂಜಾನೆ ೧೦॥ ಘಂಟೆಯಿಂದ ೧೨ ಘಂಟೆಯ ಮಧ್ಯ ಈ ನಮಾಜವು ಅರ್ಪಿಸಲ್ಪಡುತ್ತದೆ. ಈ ನಮಾಜವನ್ನು ಸಾಮೂಹಿಕವಾಗಿಯೇ ಆಚರಿಸಬೇಕು; ಒಬ್ಬೊಬ್ಬರಾಗಿ ಆಚರಿಸಬಾರದು. ಇದು "ವಾಜಿಬ್ ನಮಾಜ" (ಅನಿವಾರ್ಯವಾದ ಪ್ರಾರ್ಥನೆ) ಆಗಿರುತ್ತದೆ

(೩) ನಮಾಜೆ-ಈದುದ್ದುಹಾ:-ಬಕ್ರೀದ-ಹಬ್ಬದ ದಿವಸ ಮುಂಜಾನೆ ೮ ಘಂಟೆಯಿಂದ ೧೦॥ ಘಂಟೆಯ ಮಧ್ಯ ಈ ನಮಾಜವು ಸಾರ್ವತ್ರಿಕವಾಗಿಯೇ ಅರ್ಪಿಸಲ್ಪಡುತ್ತದೆ. ಇದೂ ಸಹ "ವಾಜಿಬ್-ನಮಾಜ" ಆಗಿದೆ.

(೪) ನಮಾಜೆ-ವಿತ್ರ:—ಪ್ರತಿದಿನ, ನಮಾಜೆ-ಇಷಾದ ನಂತರ ಆಚರಿಸಲ್ಪಡುತ್ತದೆ ಇದು ಸಹ "ವಾಜಿಬ್-ನಮಾಜ್" ಆಗಿದೆ.

(೫) "ನಮಾಜೆ-ತರಾವೀಹ್":— ರಮ್ಜಾನ ತಿಂಗಳಲ್ಲಿ ಪ್ರತಿ ದಿವಸ "ನಮಾಜೆ-ಇಷಾ" ದ ನಂತರ ಈ ನಮಾಜವು ಅರ್ಪಿಸಲ್ಪಡುತ್ತದೆ. ಇದು "ನಮಾಜೆ-ಸುನ್ನತ್" (ಪೈಗಂಬರರಿಂದ ಅನುಕರಣೀಯನಾಗಿ ಬಂದಂಥ ಪ್ರಾರ್ಥನೆ) ಆಗಿದೆ

ಶಿಷ್ಯ: ಹಾಗಾದರೆ, ಪ್ರತಿ ಮುಸಲ್ಮಾನನು ತಪ್ಪದಲೇ ನೇಮಿತನಾಗಿ ಮಾಡಲೇಬೇಕಾದಂಥ ನಮಾಜಗಳು ಎಷ್ಟಿದ್ದಂತಾಯಿತು?

ಗುರು: ನೇಮಿತನಾಗಿ ಮಾಡಲೇಬೇಕಾದಂಥ ನಮಾಜಗಳು ಒಟ್ಟು ಹತ್ತು ಇರುತ್ತವೆ. ಅವು ಯಾವವೆಂದರೆ:—

(ಅ) ಫರ್ಜ:— (೧) ನಮಾಜೆ-ಫಜ್ರ; (೨) ನಮಾಜೆ-ಝೊಹರ್;
(೩) ನಮಾಜೆ-ಅಸ್ರ; (೪) ನಮಾಜೆ-ಮಗ್ರಿಬ್,
(೫) ನಮಾಜೆ-ಇಷಾ; ಮತ್ತು (೬) ನಮಾಜೆ-ಜಮ್ಮಾ

(ಬ) ವಾಜಿಬ:— (೭) ನಮಾಜೆ-ವಿತ್ರ; (೮) ನಮಾಜೆ-ಈದುಲ್ ಫಿತ್ರ; (೯) ಮತ್ತು ನಮಾಜೆ-ಈದುದ್ದುಹಾ.

(ಕ) ಸುನ್ನತ:— (೧೦) ನಮಾಜೆ- ತರಾವೀಹ್.

ಶಿಷ್ಯ:— ಫರ್ಜ, ವಾಜಿಬ್ ಮತ್ತು ಸುನ್ನತ್ ಈ ಮೂರು ತರದ ನಮಾಜಗಳ ಹೊರ್ತಾಗಿ, ಮತ್ತೆ ಬೇರೆ ತರದ ನಮಾಜಗಳು ಇರುತ್ತವೆ ಯೇನು ?

ಗುರು:— ಅಹುದು ಇರುತ್ತವೆ. ಫರ್ಜ, ಸುನ್ನತ್ ಮತ್ತು ವಾಜಿಬ್ ನಮಾಜಗಳನ್ನು ಮಾಡಲೇಬೇಕೆಂಬ ಬಂಧನವಿದೆ. ಆದರೆ ಬಂಧನವಿಲ್ಲದಿದ್ದರೂ ಸಹ, ಸ್ವಸಂತೋಷದಿಂದ ಮಾಡುವಂಥ ಕೆಲವು ನಮಾಜಗಳಿರುತ್ತವೆ. ಅಂಥ ನಮಾಜಗಳಿಗೆ "ನಫೀಲ್-ನಮಾಜ" (ಅಧಿಕ-ಪ್ರಾರ್ಥನೆ) ಅನ್ನುತ್ತಾರೆ,

ಶಿಷ್ಯ:— ಅಂತೂ, ಎಷ್ಟು ತರದ ನಮಾಜಗಳು ಇದ್ದಂತಾಯಿತು ?

ಗುರು:— ಫರ್ಜ, ವಾಜಿಬ್, ಸುನ್ನತ್ ಮತ್ತು ನಫೀಲ್ ಎಂಬ ನಾಲ್ಕು ತರದ ನಮಾಜಗಳಿರುತ್ತವೆ. ಎಲ್ಲ ತರದ ನಮಾಜಗಳೂ ಪರಮಾತ್ಮನಿಗಾಗಿಯೇ ಅರ್ಪಿಸಲ್ಪಡುತ್ತವೆ; ಆದರೂ, ಬೇರೆ ರೇರೆ ತರದ ನಮಾಜಗಳ ತರಗತಿಗಳು ಬೇರೆ ಬೇರೆಯಾಗಿವೆ. ಯಾವ ನಮಾಜಗಳನ್ನು ಪ್ರತಿಯೋರ್ವನು ಮಾಡಲೇಬೇಕೆಂದು ಪರಮಾತ್ಮನು ಆಜ್ಞೆಯನ್ನಿತ್ತಿರುವನೋ, ಅಂಥ ನಮಾಜಗಳಿಗೆ "ಫರ್ಜ-ನಮಾಜ" ಅನ್ನುತ್ತಾರೆ. ಪರಮಾತ್ಮನ ಆಜ್ಞೆಗಳನ್ನು ಪಾಲಿಸುವದಕ್ಕಾಗಿ ಫರ್ಜ ನಮಾಜಗಳನ್ನು ಅರ್ಪಿಸಬೇಕು. ಫರ್ಜ-ನಮಾಜಗಳನ್ನು ಅರ್ಪಿಸದಿದ್ದರೆ, ಪರಮಾತ್ಮನ ಆಜ್ಞೆಯನ್ನು ಧಿಃಕರಿಸಿದಂತಾಗುತ್ತದೆ.

ಪರಮಾತ್ಮನ ಆಜ್ಞೆಯಿಲ್ಲದಿದ್ದರೂ, ಹ|| ಮಹಮ್ಮದ ಪೈಗಂಬರರ ಅನುಕರಣೆಯನ್ನು ಮಾಡುವದಕ್ಕಾಗಿ ಅರ್ಪಿಸಲ್ಪಡುವ ನಮಾಜಕ್ಕೆ "ನಮಾಜೆ-ಸುನ್ನತ್' ಅನ್ನುತ್ತಾರೆ. ಪೈಗಂಬರರನ್ನು ಅನುಕರಿಸುವ ಉದ್ದೇಶದಿಂದ "ಸುನ್ನತ್-ನಮಾಜ" ವನ್ನು ಪರಮಾತ್ಮನಿಗೆ ಅರ್ಪಿಸಬೇಕು. "ಸುನ್ನತ್-ನಮಾಜ"ವನ್ನು ಅರ್ಪಿಸದಿದ್ದರೆ, ಹ|| ಮಹಮ್ಮದ ಪೈಗಂಬರರನ್ನು ಕಡೆಗಣಿಸಿದಂತಾಗುವದು.

ಮಾನವನಿಗೆ ನಾನಾ ರೀತಿಯಾಗಿ ಅನುಗ್ರಹಗಳನ್ನು ದಯಪಾಲಿಸಿದ ಪರಮಾತ್ಮನ ಋಣವನ್ನು ತೀರಿಸುವದಕ್ಕಾಗಿ, ಮಾನವನು ದಿನಂಪ್ರತಿ

ಪರಮಾತ್ಮನನ್ನು ನೆನೆಯುವದು ಅನಿವಾರ್ಯವಾಗಿದೆ. ಈ ಉದ್ದೇಶಕ್ಕಾಗಿ ಅರ್ಪಿಸಲ್ಪಡುವ ನಮಾಜಗಳಿಗೆ "ವಾಜಿಬ್-ನಮಾಜ" ಅನ್ನುತ್ತಾರೆ. ವಾಜಿಬ್ ನಮಾಜಗಳನ್ನು ಮಾಡದಿದ್ದರೆ ಪರಮಾತ್ಮನ ಋಣವನ್ನು ಕಡೆಗೆಣಿಸಿದಂತಾಗುತ್ತದೆ.

ಯಾವದೇ ತರದ ನಿರ್ಬಂಧಗಳು ಇಲ್ಲದಿದ್ದರೂ ಸಹ, ಪರಮಾತ್ಮನನ್ನು ಸಂತೈಸುವದಕ್ಕಾಗಿ ತಮಗೆ ಶಕ್ಯವಿದ್ದಾಗಲೆಲ್ಲ ಸ್ವಸಂತೋಷದಿಂದ ಪರಮಾತ್ಮನನ್ನು ಪ್ರಾರ್ಥಿಸುವದಕ್ಕೆ "ನಫೀಲ್-ನಮಾಜ" ಅನ್ನುತ್ತಾರೆ. ನಫೀಲ್ ನಮಾಜಗಳನ್ನು ಅರ್ಪಿಸದಿದ್ದರೆ, ಯಾವದೇ ತರದ ಪಾಪವು ತಟ್ಟುವದಿಲ್ಲ.

:— ನಮಾಜ ಮಾಡುವದರಿಂದ ಬರುವ ಲಾಭಗಳಾವವು ?

ಗುರು:— ನಮಾಜವು, ಪ್ರತಿ ಮುಸಲ್ಮಾನನು ಕಡ್ಡಾಯವಾಗಿ ಮಾಡಲೇಬೇಕಾದ ಕರ್ತವ್ಯವಾಗಿದೆ. ನಮಾಜ ಮಾಡುವದರಿಂದ ಅನೇಕ ಲೌಕಿಕ ಮತ್ತು ಪಾರಮಾರ್ಥಿಕ (ದೀನ್ವಿ) ಲಾಭಗಳು ದೊರೆಯುತ್ತವೆ. ಅವು ಯಾವವೆಂದರೆ:-

**(ಅ) ಲೌಕಿಕ ಲಾಭಗಳು —**

(೧) ನಮಾಜ ಮಾಡುವವನ ಶರೀರವು ಮತ್ತು ಉಡಿಗೆತೊಡಿಗೆಗಳು ಯಾವಾಗಲೂ ಸ್ವಚ್ಛವಾಗಿ ಇರುವವು. ಯಾಕೆಂದರೆ, ನಮಾಜಕ್ಕಾಗಿ ಹಾಗೆ ಸ್ವಚ್ಛತೆಯಿಂದ ಇಡಲೇಬೇಕಾಗುತ್ತದೆ.

(೨) ನೇಮಿತವಾಗಿ ನಮಾಜ ಮಾಡುವಂಥವನು ವೇಳೆಯ ಮಹತ್ವವನ್ನು ಅರಿತುಕೊಂಡು, ತನ್ನ ಕೆಲಸಗಳೆಲ್ಲವನ್ನೂ ಸಕಾಲದಲ್ಲಿ ಮಾಡುವ ಪರಿಪಾಠವನ್ನು ಪಡೆಯುವನು. ತತ್ಪರಿಣಾಮವಾಗಿ ಸೋಮಾರಿತನವು ತಂತಾನೇ ಬಿಟ್ಟೋಡುವದು.

(೩) ನಮಾಜ ಮಾಡುವವನು ಅನೇಕ ದುಶ್ಚಟಗಳಿಂದ ದೂರಾಗಿ ಉಳಿಯುವನು.

(೪) ನಮಾಜ ಮಾಡುವಾಗ ಸಂಸಾರದ ಜಂಜಾಟಗಳಿಂದ ನಿರ್ಲಿಪ್ತ ವಾಗಿ ಉಳಿಯುವ ಅವಕಾಶವು ಲಭ್ಯವಾಗುವದಾದ್ದರಿಂದ, ತಾತ್ಪೂರ್ತಿಕ ವಾಗಿಯಾದರೂ, ಮನಸ್ಸಿಗೆ ಒಂದು ಬಗೆಯ ವಿಶ್ರಾಂತಿ ದೊರೆಯುತ್ತದೆ.

(೫) ನಮಾಜ ಮಾಡುವವರನ್ನು ಸಜ್ಜನರು ಬಹು ಆದರ ಭಾವನೆ ಗಳಿಂದ ನೋಡುವರು. ಆದ್ದರಿಂದ, ಸಮಾಜದಲ್ಲಿ ಅವರಿಗೆ ಸ್ಥಾನಮಾನಗಳು ದೊರೆಯುವವು.

(೬) ನಮಾಜಕ್ಕಾಗಿ ನೇಮಿತವಾಗಿ ಮಸೀದೆಗೆ ಹೋಗುವದರಿಂದ ನಾನಾ ಸ್ವಭಾವದ ಮತ್ತು ನಾನಾ ವೃತ್ತಿಗಳ ಜನರ ಸಹವಾಸದ ಸದುಪ ಯೋಗವನ್ನು ಮಾಡಿಕೊಳ್ಳಲು ಅವಕಾಶವು ದೊರೆಯುವದು.

**(ಬ) ಪಾರಮಾರ್ಥಿಕ ಲಾಭಗಳು —**

(೧) ಆತ್ಮೋನ್ನತಿಯನ್ನು ಮಾಡಿಕೊಂಡು ಪರಮಾತ್ಮನ ಸಾಮೀಪ್ಯ ವನ್ನು ಹೊಂದಲು, ನಮಾಜವೇ ಅತಿ ಹಗುರಾದ ಮತ್ತು ಸರಳಾದ ಸಾಧನ ವಾಗಿದೆ. ಇಲ್ಲಿಯ ವರೆಗೆ ಆಗಿ ಹೋದ ಸತ್ಪುರುಷರೆಲ್ಲರೂ ( ಅಂಬಿಯಾ, ಔಲಿಯಾ ) ಈ ಸಾಧನದಿಂದಲೇ ಪರಮಾತ್ಮನ ಸಾಮೀಪ್ಯವನ್ನು ( ಕುರ್ಬತೆ-ಖುದಾಯಿ) ಹೊಂದಿರುವರು.

(೨) ನಮಾಜೀ ಜನರು ಪರಮಾತ್ಮನ ಪ್ರೀತಿಗೆ ಪಾತ್ರರಾಗುವರು; ಮತ್ತು ನ್ಯಾಯದಾನದ ಸಮಯದಲ್ಲಿ ಪರಮಾತ್ಮನು ಅವರನ್ನು ಕಾರುಣ್ಯ ದೃಷ್ಟಿಗಳಿಂದ ಈಕ್ಷಿಸುವನು.

(೩) ನಮಾಜೀ ಜನರನ್ನು ಹ|| ಮಹಮ್ಮದ ಪೈಗಂಬರರು ಪ್ರೀತಿಸು ವರು; ಮತ್ತು ನ್ಯಾಯದಾನದ ಸಮಯದಲ್ಲಿ ಅವರಿಗೆ ಬೆಂಬಲಿಗರಾಗಿ ಬರುವರು.

(೪) ಮರಣಾ ನಂತರ, ನಮಾಜೀ ಜನರ ಆತ್ಮಗಳಿಗೆ ಪರಮಾತ್ಮನು ಸುಖ ಶಾಂತಿಗಳನ್ನೊದಗಿಸುವನು.

(೫) ಪರಮಾತ್ಮನ ದೃಷ್ಟಿಯಲ್ಲಿ ನಮಾಜೀ ಜನರು ಪ್ರತಿಷ್ಠಿತ ರಾದವರು ಇರುವರು.

(೬) ನಮಾಜೀ ಜನರ ಕ್ಷಮಾಯಾಚನೆಗಳನ್ನು ಪರಮಾತ್ಮನು ನಿಶ್ಚಯವಾಗಿಯೂ ಸ್ವೀಕರಿಸುವನು, ಅಂದರೆ, ಮನ್ನಿಸುವನು.

ಶಿಷ್ಯ:— ನಮಾಜ ಮಾಡುವಾಗ ಪಶ್ಚಿಮದ ಕಡೆಗೆ ಮುಖವನ್ನು ಮಾಡಿ ಏಕೆ ನಿಲ್ಲುತ್ತಾರೆ?

ಗುರು:— ಯಾಕೆಂದರೆ, "ಕಾಬಾ" ಎಂಬ ಪವಿತ್ರವಾದ ದೇವ-ಮಂದಿರವು ನಮ್ಮ ಪಶ್ಚಿಮ ದಿಕ್ಕಿಗೆ ಇದೆ. ಅಂತೆಯೇ ನಾವು ಪಶ್ಚಿಮದ ಕಡೆಗೆ ಹೊರಳುತ್ತೇವೆ. ಜಗತ್ತಿನಲ್ಲಿಯ ಮುಸಲ್ಮಾನರೆಲ್ಲರೂ- ಎಲ್ಲಿಯವರೇ ಇರಲಿ, ಯಾವ ದೇಶದವರೇ ಇರಲಿ- ಆ ಕಾಬಾ ಮಂದಿರದ ದಿಕ್ಕಿನೆಡೆಗೆ ಮುಖ-ಗಳನ್ನು ತಿರುಗಿಸುವರು. ಯಾಕೆಂದರೆ, ಕುರಾನ ಗ್ರಂಥದಲ್ಲಿ ಪರಮಾತ್ಮನು ಹಾಗೆ ಸ್ಪಷ್ಟವಾದ ಆಜ್ಞೆಯನ್ನಿತ್ತಿದ್ದಾನೆ.

ಶಿಷ್ಯ:— ಪವಿತ್ರ ಕಾಬಾ ಮಂದಿರವು ಎಲ್ಲಿದೆ ?

ಗುರು:— ಅರಬಸ್ತಾನದ ರಾಜಧಾನಿಯಾದ ಮಕ್ಕಾ ಪಟ್ಟಣದಲ್ಲಿ ಇದೆ.

ಶಿಷ್ಯ:— ನಮಾಜ ಮಾಡುವಾಗ ಅನುಕ್ರಮವಾಗಿ ಏನೇನು ಮಾಡಬೇಕಾಗುತ್ತದೆ. ?

ಗುರು:— ಎಲ್ಲಕ್ಕೂ ಮೊದಲು ಪರಮಾತ್ಮನನ್ನು ನೆನೆಯುತ್ತ, ಯಾವ ನಮಾಜವನ್ನು ಮಾಡಬೇಕಾಗಿದೆಯೋ ಆ ನಮಾಜದ "ನಿಯ್ಯತ್" ಮಾಡಬೇಕು; (೨) ಆ ಮೇಲೆ ಕೆಲವು ಸೂಕ್ತಗಳನ್ನೂ, ಕುರಾನವನ್ನೂ ಪಠಿಸಬೇಕು; (೩) ಆ ನಂತರ "ರುಕೂ" ಮಾಡಬೇಕು; (೪) ತದನಂತರ ಎರಡು "ಸಿಜ್ದಾ" ಗಳನ್ನು ಮಾಡಬೇಕು; (೫) ಆ ಮೇಲೆ "ಕಾಯ್ದಾ" ದಲ್ಲಿ ಕುಳಿತು ಕೆಲವು ಸೂಕ್ತಗಳನ್ನು ಪಠಿಸಬೇಕು; (೬) ಆ ನಂತರ "ಸಲಾಮ್" ಹೊರಳಬೇಕು; ತದ ನಂತರ "ದುಆ" ಪಠಿಸಬೇಕು.

ಶಿಷ್ಯ:— "ನಿಯ್ಯತ್" ಅಂದರೆ ಏನು ?

ಗುರು:— ನಿಯ್ಯತ್ ಅಂದರೆ, ಉದ್ದೇಶ, ಇಚ್ಛೆ ಎಂದು ಅರ್ಥವಾಗುತ್ತದೆ.

ಶಿಷ್ಯ:— "ನಮಾಜದ ನಿಯ್ಯತ್ ಮಾಡಬೇಕು" ಅಂದರೇನು ?

ಗುರು:—ಅಂದರೆ, ನಮಾಜದ ಉದ್ದೇಶವಿವರಣೆಯನ್ನು ಮಾಡಬೇಕು. ಉದ್ದೇಶ ವಿವರಣೆಯ ನಂತರವೇ ನಮಾಜವನ್ನು ಪ್ರಾರಂಭಿಸಬೇಕಾಗುತ್ತದೆ. ಯಾವದೇ ನಮಾಜವನ್ನು ಪ್ರಾರಂಭಿಸುವದಕ್ಕಿಂತ ಮೊದಲು ಆ ನಮಾಜದ ಉದ್ದೇಶ ವಿವರಣೆಯನ್ನು ಮಾಡಲೇಬೇಕಾಗುತ್ತದೆ. ಉದಾಹರಣಾರ್ಥವಾಗಿ ಪ್ರಾತಃಕಾಲ-ಪ್ರಾರ್ಥನೆಯ ಎರಡು ಫರ್ಜ - ರಕಾತಗಳ ಉದ್ದೇಶವಿವರಣೆಯನ್ನು ಹೀಗೆ ಮಾಡಬೇಕು:—

"ನವೈತು ಅನ್ ಉಸೊಲ್ಲಿ ಲಿಲ್ಲಾಹಿ ತಆಲಾ, ರಕಾಅತೈನಿ ಸಲಾತುಲ್ ಫಜ್ರ ಫರದುಲ್ಲಾಹಿ ತಆಲಾ. ಫರ್ದ ಹಾಜಲ್‌ವಕ್ತ; ಇಕ್ತದೈತು ಬಿ ಹಾಜಲ್ ಇಮಾಮ್, ಮುತವಜ್ಜಿಹನ್ ಇಲಾ ಜ್ಞತಿಲ್ ಕಾಬತಿಷ್ಷರೀಪತಿ, (ಅಲ್ಲಾಹು ಅಕಬರ್)"

ಅನು॥ "ನೇಮಿತವಾದ ವೇಳೆಗೆ ಸರಿಯಾಗಿ, ಪವಿತ್ರ ಕಾಬಾದೆಡೆ ಮುಖವನ್ನು ಮಾಡಿ, ಈ ಮುಖಂಡನ ಅಂಕಿತಕ್ಕೆ ಒಳಪಟ್ಟು, ಪ್ರಾತಃಕಾಲ-ಪ್ರಾರ್ಥನೆಯ ಕಡ್ಡಾಯವಾದ ದ್ವಿಪವಗಳನ್ನು (ಎರಡು ರಕಾತಗಳನ್ನು) ಪರಮಾತ್ಮನಿಗಾಗಿ ಅರ್ಪಿಸಬೇಕೆಂದು ನಾನು ಉದ್ದೇಶಿಸುತ್ತೇನೆ."

ಶಿಷ್ಯ:— "ರುಕು' ಅಂದರೆ ಏನು ?

ಗುರು.— "ರುಕು" ಈ ಶಬ್ದದ ಅರ್ಥವು ಬಾಗು ಎಂದಾಗುತ್ತದೆ. ನಮಾಜ ಮಾಡುವಾಗ ಕುರಾನ ಪಠಣೆ ಮುಗಿದ ನಂತರ ಪರಮಾತ್ಮನ ಸನ್ನಿಧಿಯಲ್ಲಿ ನಮ್ರದಿಂದ ಅರ್ಧಾಕಾರವಾಗಿ (ಚಂದ್ರಾಕಾರವಾಗಿ) ಬಾಗಿ, ಪರಮಾತ್ಮನ ಗುಣಗಾನಗಳನ್ನು ಮಾಡಬೇಕಾಗುತ್ತದೆ. ನಮಾಜಕಾಲದಲ್ಲಿ ಹೀಗೆ ಬಾಗುವದಕ್ಕೆ "ರುಕು" ಅನ್ನುತ್ತಾರೆ.

ಶಿಷ್ಯ:— "ಸಿಜ್ದಾ" ಅಂದರೆ ಏನು ?

ಗುರು:— "ಸಿಜ್ದಾ" ಈ ಶಬ್ದದ ಅರ್ಥವು ಸಾಷ್ಟಾಂಗವೆರಗುವಿಕೆ ಎಂದಾಗುತ್ತದೆ. ನಮಾಜ ಮಾಡುವಾಗ ರುಕೂದಿಂದ ಎದ್ದು ನಿಂತ ನಂತರ (ಅಂದರೆ, ಬಾಗಿದ ಅವಸ್ಥೆಯಿಂದ ಮೇಲಕ್ಕೆ ನೀಟಾಗಿ ಎದ್ದು ನಿಂತ ನಂತರ) ಪರಮಾತ್ಮನ ಪಾದಾರವಿಂದಗಳಿಗೆ ಹಣೆಯೊಡ್ಡಿ ಸಾಷ್ಟಾಂಗವೆರಗ

ಬೇಕಾಗುತ್ತದೆ. ನಮಾಜಕಾಲದಲ್ಲಿ ಹೀಗೆ ನೆಲಕ್ಕೆ ಹಣೆಯನ್ನೊಡ್ಡಿ ಸಾಸ್ಟಾಂಗವೆರಗುವದಕ್ಕೆ "ಸಿಜ್ದಾ" ಎನ್ನುತ್ತಾರೆ.

ಶಿಷ್ಯ:— "ರಕಾತ" ಅಂದರೆ ಏನು ?

ಗುರು:— "ರಕಾತ" ಅಂದರೆ, ಪದ, ಚರಣ, ಭಾಗ ಎಂದು ಅರ್ಥಗಳಾಗುತ್ತವೆ. ನಮಾಜ ಮಾಡುವಾಗ ಕುರಾನ ಪಠಣೆಯು ಮುಗಿದ ನಂತರ ಮೊದಲು ಒಮ್ಮೆ ಅರ್ಧಾಕಾರವಾಗಿ ಬಾಗಿ, ಆ ಮೇಲೆ ಎರಡಾವರ್ತಿ ಸಾಸ್ಟಾಂಗವೆರಗಬೇಕಾಗುತ್ತದೆ. ನಮಾಜದ ಆದಿಯಿಂದ ಹಿಡಿದು ಎರಡಾವರ್ತಿ ಸಾಸ್ಟಾಂಗವೆರಗುವ ವರೆಗಿನ ನಮಾಜದ ಭಾಗಕ್ಕೆ "ರಕಾತ" ಎನ್ನುತ್ತಾರೆ.

ಶಿಷ್ಯ:— ಅಂದ ಮೇಲೆ, ಒಂದು ರಕಾತದಲ್ಲಿ, ಒಂದು ರುಕು ಮತ್ತು ಎರಡು ಶಿಜ್ದಾಗಳು ಇದ್ದಂತಾಯಿತಲ್ಲವೇ ?

ಗುರು:— ಅಹುದು, ಒಂದು ರಕಾತದಲ್ಲಿ, ಒಂದು ರುಕು ಮತ್ತು ಎರಡು ಸಿಜ್ದಾಗಳು ಇರುತ್ತವೆ, ಅರ್ಥಾತ್ ಒಂದು ರುಕು ಮತ್ತು ಎರಡು ಸಿಜ್ದಾಗಳು ಕೂಡಿ, ಒಂದು ರಕಾತ ಆಗುತ್ತದೆ.

ಶಿಷ್ಯ:— "ಕಯಾಮಾ" ಅಂದರೆ ಏನು ?

ಗುರು:—ನಮಾಜ ಮಾಡುವಾಗ ಎದ್ದು ನಿಂತು ಕುರಾನ ಪಠನೆಯನ್ನು ಮಾಡಬೇಕಾಗುತ್ತದೆ. ನಮಾಜಕಾಲದಲ್ಲಿ ಹೀಗೆ ಎದ್ದು ನಿಂತಿರುವದಕ್ಕೆ "ಕಯಾಮಾ" ಎನ್ನುತ್ತಾರೆ.

ಶಿಷ್ಯ:— "ಕಾಯ್ದಾ" ಅಂದರೆ ಏನು ?

ಗುರು:— ನಮಾಜ ಮಾಡುವಾಗ, ಎರಡು ರಕಾತಗಳು ಮುಗಿಯುತ್ತಲೇ ಕುಳಿತುಕೊಂಡು, ಕೆಲವು ಸೂಕ್ತಗಳನ್ನು ಪಠಿಸಬೇಕಾಗುತ್ತದೆ. ನಮಾಜಕಾಲದಲ್ಲಿ ಹೀಗೆ ಕುಳಿತುಕೊಂಡಿರುವದಕ್ಕೆ "ಕಾಯ್ದಾ" ಎನ್ನುತ್ತಾರೆ.

ಶಿಷ್ಯ:— ಅಂತೂ, ನಮಾಜದಲ್ಲಿ ಎಷ್ಟು "ಮುಕಾನಗಳು" (ಅವಸ್ಥೆಗಳು) ಇದ್ದಂತಾಯಿತು ?

ಗುರು:— ನಮಾಜದಲ್ಲಿ ನಾಲ್ಕು ಮುಕಾನುಗಳು ಇರುತ್ತವೆ.

ಯಾವವೆಂದರೆ.:—

(೧) "ಕಯಾಮಾ" — ನಿಂತುಕೊಂಡಿರುವ ಅವಸ್ಥೆ

(೨) "ರುಕೂ" — ಬಾಗಿದ ಅವಸ್ಥೆ

(೩) "ಸಿಜ್ದಾ" —ಸಾಸ್ಟಾಂಗದ ಅವಸ್ಥೆ

(೪) "ಕಾಯ್ದಾ" —ಕುಳಿತುಕೊಂಡಿರುವ ಅವಸ್ಥೆ

ಶಿಷ್ಯ:— ಪ್ರತಿ ನಮಾಜದಲ್ಲಿ ರಕಾತಗಳು ಎಷ್ಟಿವೆ. ?

ಗುರು:— ಕೆಲವು ನಮಾಜಗಳಲ್ಲಿ ಎರಡು, ಕೆಲವುಗಳಲ್ಲಿ ಮೂರು ಮತ್ತು ಕೆಲವುಗಳಲ್ಲಿ ನಾಲ್ಕು ರಕಾತುಗಳು ಇರುತ್ತವೆ.

ಶಿಷ್ಯ:— ಒಂದೇ ರಕಾತವ ಅಥವಾ ನಾಲ್ಕರಕ್ಕಿಂತ ಹೆಚ್ಚು ರಕಾತುಗಳುಳ್ಳ ನಮಾಜವು ಇರುವದಿಲ್ಲೇನು ?

ಗುರು:— ಇಲ್ಲ. [ಆದರೆ ಕೆಲವು ವಿಶಿಷ್ಟವಾದ ನಮಾಜಗಳಲ್ಲಿ ನಾಲ್ಕರಕ್ಕಿಂತ ಹೆಚ್ಚು ರಕಾತುಗಳು ಇರುತ್ತವೆ. — ಮಾಹಿತಿಗಾಗಿ ದೊಡ್ಡಗ್ರಂಥಗಳನ್ನು ನೋಡಬೇಕು. — ಲೇಖಕ]

ಶಿಷ್ಯ:— ಫರ್ಜ-ನಮಾಜ, ಸುನ್ನತ್-ನಮಾಜ, ವಾಜಿಬ್-ನಮಾಜ, ಮತ್ತು ನಫೀಲ್-ನಮಾಜ ಎಂಬ ನಾಲ್ಕು ತರದ ನಮಾಜಗಳು ಇರುತ್ತವೆಯಲ್ಲವೇ ? ಬೇರೆ ಬೇರೆ ತರದ ನಮಾಜಗಳ ರಕಾತಗಳಿಗೆ ಬೇರೆ ಬೇರೆ ಹೆಸರುಗಳು ಇರುವವೇನು ?

ಗುರು:— ಅಹುದು. ಫರ್ಜ-ನಮಾಜದ ರಕಾತಗಳಿಗೆ ಫರ್ಜ ರಕಾತ್ ಎನ್ನುತ್ತಾರೆ; ಸುನ್ನತ್–ನಮಾಜದ ರಕಾತಗಳಿಗೆ ಸುನ್ನತ್-ರಕಾತ್, ವಾಜಿಬ್–ನಮಾಜದ ರಕಾತಗಳಿಗೆ ವಾಜಿಬ್-ರಕಾತ್, ಮತ್ತು ನಫೀಲ್-ನಮಾಜದ ರಕಾತಗಳಿಗೆ ನಫೀಲ್-ರಕಾತ್ ಎನ್ನುತ್ತಾರೆ.

ಶಿಷ್ಯ:— ಪ್ರತಿ ಮುಸಲ್ಮಾನನು ಮಾಡಲೇ ಬೇಕಾದ ಹತ್ತು ನಮಾಜಗಳಲ್ಲಿಯ ಪ್ರತಿಯೊಂದರಲ್ಲಿ ಯಾವ ಯಾವ ರಕಾತಗಳು ಎಷ್ಟೆಷ್ಟು ಇರುತ್ತವೆ ಎಂಬುವದನ್ನು ಸವಿಸ್ತಾರವಾಗಿ ಹೇಳುವಿರಾ ?

ಗುರು:— ಆಯಾ ನಮಾಜಗಳಲ್ಲಿ ಆಯಾ ರಕಾತಗಳು ಎಷ್ಟೆಷ್ಟು ಇರುತ್ತವೆಯೆಂದರೆ:--

(೧) ನಮಾಜೆ-ಫಜ್ರು:- { ಸುನ್ನತ್-ರಕಾತಗಳು—೨, ಫರ್ಜ-ರಕಾತಗಳು —೨ } ಒಟ್ಟು ನಾಲ್ಕು.

(೨) ನಮಾಜೆ-ಝೊಹರ್:- { ಸುನ್ನತ್-ರಕಾತಗಳು —೪, ಫರ್ಜ-ರಕಾತಗಳು —೪, ಸುನ್ನತ್-ರಕಾತಗಳು —೨, ನಫೀಲ್-ರಕಾತಗಳು —೨ } ಒಟ್ಟು ಹನ್ನೆರಡು.

(೩) ನಮಾಜೆ-ಅಸ್ರ :- { ಸುನ್ನತ್-ರಕಾತಗಳು —೪, ಫರ್ಜ-ರಕಾತಗಳು —೪ } ಒಟ್ಟು ಎಂಟು.

(೪) ನಮಾಜೆ-ಮಗ್ರಿಬ್ :- { ಫರ್ಜ-ರಕಾತಗಳು —೩, ಸುನ್ನತ್-ರಕಾತಗಳು —೨, ನಫೀಲ್-ರಕಾತಗಳು —೨ } ಒಟ್ಟು ಏಳು.

(೫) ನಮಾಜೆ-ಇಷಾ :- { ಸುನ್ನತ್-ರಕಾತಗಳು —೪, ಫರ್ಜ-ರಕಾತಗಳು —೪, ಸುನ್ನತ್‌ರಕಾತಗಳು —೨, ನಫೀಲ್-ರಕಾತಗಳು —೨ }

(೬) ನಮಾಜೆ-ವಿತ್ರು :- { ವಾಜಿಬ್-ರಕಾತಗಳು —೩, ನಫೀಲ್-ರಕಾತಗಳು —೨ } ಒಟ್ಟು ಹದಿನೇಳು

(೭) ನಮಾಜೆ-ಜುಮ್ಮಾ:—(ತ್ಹತಲ್ ವಜೂ) ನಫೀಲ್-ರಕಾತ್—೨
(ತ್ಹತಲ್‌ಮಸ್ಜಿದ್) ನಫೀಲ್-ರಕಾತ್-೨
(ಕಬ್ಲಲ್‌ಜುಮ್ಮಾ) ಸುನ್ನತ್-ರಕಾತ್-೪
(ಜುಮ್ಮಾ) ಫರ್ಜ-ರಕಾತ್ -೨
(ಬಾದಲ್‌ಜುಮ್ಮಾ) ಸುನ್ನತ್-ರಕಾತ್-೪
(,,) ಸುನ್ನತ್-ರಕಾತ್ -೨
(,,) ನಫೀಲ್-ರಕಾತ್ -೨
ಒಟ್ಟು, ನೆಂಟು

(೮) ನಮಾಜೆ-ಈದುಲ್ ಫಿತ್ರ:- ವಾಜಿಬ್-ರಕಾತಗಳು —೨

(೯) ನಮಾಜೆ-ಈದುದ್ದುಹಾ :- ವಾಜಿಬ್-ರಕಾತಗಳು —೨

(೧೦) ನಮಾಜೆ-ತರಾವೀಹ್ :- ಸುನ್ನತ್-ರಕಾತಗಳು —೨೦

ಶಿಷ್ಯ:— ಯಾವದೇ ನಮಾಜ ಮಾಡಬೇಕಾದರೆ ಮೊದಲು ನಿಯ್ಯತ್ ಮಾಡಬೇಕಲ್ಲವೇ ? ಫರ್ಜ-ನಮಾಜದ ನಿಯ್ಯತ್ ಹೇಗೆ ಮಾಡಬೇಕು ?

ಗುರು:— ಫರ್ಜ-ನಮಾಜಗಳ ನಿಯ್ಯತ್ ಹೀಗೆ ಮಾಬೇಕು:-

“ ನನ್ವೈತು ಅನ್ ಉಸೊಲ್ಲಿ ಲಿಲ್ಲಾಹಿ ತಆಲಾ..............(೧)............... ಸಲಾತುಲ್............(೨)............ಫರದುಲ್ಲಾಹಿ ತಆಲಾ, ಫರ್ದ ಹಾಜಲ್ ವಕ್ತ ( ಇಕ್ತದೈತು ಬಿ ಹಾಜಲ್ ಇಮಾಮ್ ) ಮುತವಜ್ಜಿಹನ್ ಇಲಾ ಜ್ಹತಿಲ್ ಕಾಬತೀಷ್ಷರೀಫತಿ ”

ಟಿಪ್ಪಣಿ:—

(೧) ಎರಡು ರಕಾತಗಳಿದ್ದರೆ, ಇಲ್ಲಿ “ ರಕಾಅತೈನಿ ” ಅನ್ನಬೇಕು.
ಮೂರು ,, ,, “ ಸಲಾಸ ರಕಅತಿನ್ ”
ನಾಲ್ಕು ,, ,, “ ಅರ್ಬಅ ರಕಅತಿನ್”

(೨) ಫಜ್ರ, ಝೋಹರ, ಅಸ್ರ ಮಗ್ರಿಬ್, ಇಷಾ, ಜುಮಾಅತಿ, (ಜುಮ್ಮಾ) ಈ ಆರು ಫರ್ಜ-ನಮಾಜಗಳಲ್ಲಿ ಯಾವದನ್ನು ಮಾಡಬೇಕಾಗಿದೆಯೋ, ಅದನ್ನು ಇಲ್ಲಿ ಅನ್ನಬೇಕು.

(೩) ಇಮಾಮನ ಹಿಂದೆ ನಿಂತು ನಮಾಜು ಮಾಡುವಾಗ ಮಾತ್ರ ( ಇಕ್ತದೈತು ಬಿಹಾಜಲ್ ಇಮಾಮ್) ಅಂತಾ ಅನ್ನಬೇಕು. ಒಬ್ಬನೇ ಮಾಡುವಾಗ ಅಥವಾ ಸ್ವತಃ ಇಮಾಮನಾದಾಗ ಹೀಗೆ ಅನ್ನಬಾರದು.

ಶಿಷ್ಯ:— ಸುನ್ನತ್ ನಮಾಜದ ನಿಯ್ಯತ್ ಹೇಗೆ ಮಾಡಬೇಕು ?

ಗುರು:— ಹೀಗೆ ಮಾಡಬೇಕು :-

“ ನನ್ವೈತು ಅನ್ ಉಸೊಲ್ಲಿ ಲಿಲ್ಲಾಹಿ ತಆಲಾ................(೧)................ ಸಲಾತುಲ್................(೨)................ಸುನ್ನತ ರಸೂಲಿಲ್ಲಾಹಿ ತಆಲಾ ಮುತವಜ್ಜಿಹನ್ ಇಲಾ ಜ್ಹತಿಲ್ ಕಾಬತಿಷ್ಷರೀಫತಿ ”

ಟಿಪ್ಪಣಿ:—

(೧) ಎರಡು ರಕಾತಗಳಿದ್ದರೆ, ಇಲ್ಲಿ ರಕಾಅತೈನಿ ಅನ್ನಬೇಕು.
ನಾಲ್ಕು ,, ,, ಅರ್ಬಅ ರಕಅತಿನ್ ,,

(೨) ಫಜ್ರ. ಝೋಹರ. ಅಸ್ರ. ಮಗ್ರಿಬ್. ಇಷಾ' ಕಬ್ಲ'ಅ್-ಜುಮಾಅತಿ. ಬಾದಲ್-ಜುಮಾಅತಿ. ತರಾವೀಹ. ಈ ಎಂಟು ನಮಾಜುಗಳಲ್ಲಿ ಯಾವದನ್ನು ಮಾಡಬೇಕಾಗಿದೆಯೋ, ಅದನ್ನು ಇಲ್ಲಿ ಅನ್ನಬೇಕು.

(೨) ತರಾವೀ ನಮಾಜನ್ನು ಇಮಾಮನ ಹಿಂದೆ ಮಾಡುವಾಗ, "ರಸೂಲಿಲ್ಲಾಹಿ ತಆಲಾ"ದ ನಂತರ (ಇಕ್ತದೈತು ಬಿ ಹಾಜಲ್ ಇಮಾಮ್) ಅಂತಾ ಅಂದು ಮುಂದಿನದನ್ನು ಪೂರ್ಣಿಸಬೇಕು.

ಶಿಷ್ಯ:— ವಾಜಿಬ್-ನಮಾಜದ ನಿಯ್ಯತ್ ಹೇಗೆ ಮಾಡಬೇಕು ?

ಗುರು:— ಹೀಗೆ ಮಾಡಬೇಕು:-

"ನವೈತು ಅನ್ ಉಸೊಲ್ಲಿ ಲಿಲ್ಲಾಹಿ ತಆಲಾ...............(೧)............... ಸಲಾತುಲ್ ವಾಜಿಬುಲ್........(೨)............ (ಇಕ್ತದೈತು ಬಿ ಹಾಜಲ್ ಇಮಾಮ್) ಮುತವಜ್ಜಿಹನ್ ಇಲಾ ಜ್ಹತಿಲ್ ಕಾಬತಿಷ್ಷರೀಫತಿ"

ಟಿಪ್ಪಣಿ:—

(೧) ಎರಡು ರಕಾತಗಳಿದ್ದರೆ, ಇಲ್ಲಿ "ರಕಾಅತೈನಿ", ಅನ್ನಬೇಕು.
ಮೂರು " " "ಸಲಾಸ ರಕಅತಿನ್" "

(೨) ವಿತ್ರ, ಫಿತ್ರ, ದುಹಾ, ಈ ಮೂರು ನಮಾಜಗಳಲ್ಲಿ ಯಾದನ್ನು ಮಾಡಬೇಕಾಗಿದೆಯೋ, ಅದನ್ನು ಇಲ್ಲಿ ಅನ್ನಬೇಕು.

(೩) ವಿತ್ರ ನಮಾಜವನ್ನು ಒಬ್ಬನೇ ಮಾಡುವಾಗ ಅಥವಾ ಸ್ವತಃ ಇಮಾಮನಾದಾಗ, (ಇಕ್ತದೈತು ಬಿ ಹಾಜಲ್ ಇಮಾಮ್)) ಅಂತಾ ಅನ್ನಬಾರದು.

ಶಿಷ್ಯ:— ನಫೀಲ್-ನಮಾಜದ ನಿಯ್ಯತ್ ಹೇಗೆ ಮಾಡಬೇಕು ?

ಗುರು:— ಹೀಗೆ ಮಾಡಬೇಕು:-

"ನವೈತು ಅನ್ ಉಸೊಲ್ಲಿ ಲಿಲ್ಲಾಹಿ ತಆಲಾ ರಕಾಅತೈನಿ, ಮುತವಜ್ಜಿಹನ್ ಇಲಾ ಜ್ಹತಿಲ್ ಕಾಬತಿ ಷ್ಷರೀಫತಿ"

ಶಿಷ್ಯ:— "ನವೈತು ಅನ್ ಉಸೊಲ್ಲಿ ಲಿಲ್ಲಾಹಿ ತಆಲಾ" ಅಂದರೆ ಏನು ?

ಗುರು:— ಅದರ ಅರ್ಥವೇನೆಂದರೆ:– "ಪರಮಾತ್ಮನಿಗಾಗಿ ಪ್ರಾರ್ಥನೆಯನ್ನು ಅರ್ಪಿಸಬೇಕೆಂದು ನಾನು ಉದ್ದೇಶಿಸುತ್ತೇನೆ."

ಶಿಷ್ಯ:— "ಸಲಾತ್" ಅಂದರೆ ಏನು ?

ಗುರು:— ಸಲಾತ್ ಅಂದರೆ ಪ್ರಾರ್ಥನೆ ಅಥವಾ ನಮಾಜ

ಶಿಷ್ಯ:— "ಫರದುಲ್ಲಾಹಿ ತಆಲಾ" ಅಂದರೆ ಏನು ?

ಗುರು:— "ಪರಮಾತ್ಮನ ಆಜ್ಞೆಯಂತೆ ಸಲ್ಲಿಸಬೇಕಾದಂಥ"

ಶಿಷ್ಯ:— "ಫರ್ದ ಹಾಜಲ್ ವಕ್ತ" ಅಂದರೆ ಏನು?

ಗುರು.— ಅಂದರೆ. "ನೇಮಿತವಾದ ವೇಳೆಗೆ ಸರಿಯಾಗಿ"

ಶಿಷ್ಯ:— "ಇಕ್ತದೈತು ಬಿ ಹಾಜಲ್ ಇಮಾಮ್" ಅಂದರೆ ಏನು?

ಗುರು:— ಅಂದರೆ, "ಈ ಮುಖಂಡನ ಅಂಕಿತಕ್ಕೆ ಒಳಪಟ್ಟು"

ಶಿಷ್ಯ:— "ಮುತವಜ್ಜಿಹನ್ ಇಲಾ ಜ್ಹತಿಲ್ ಕಾಬತಿಷ್ಷರೀಫತಿ" ಅಂದರೆ ಏನು?

ಗುರು:— ಅಂದರೆ. "ಪವಿತ್ರ ಕಾಬಾದ ದಿಕ್ಕಿನೆಡೆ ನನ್ನ ಮುಖವನ್ನು ಮಾಡಿ"

ಶಿಷ್ಯ:— "ಸುನ್ನತ ರಸೂಲಿಲ್ಲಾಹಿ ತಆಲಾ" ಅಂದರೆ ಏನು?

ಗುರು:— ಅಂದರೆ, "ದೇವ-ಪ್ರವಾದಿಗಳಿಂದ ಅನುಕರಣೀಯವಾಗಿ ಬಂದಂಥ"

ಶಿಷ್ಯ:— "**ರಕಾಅತೈನಿ**", "**ಸಲಾಸ ರಕೆಆತಿನ್**", **ಅರ್ಬಅ-ರಕೆಆತಿನ್**", ಈ ಶಬ್ದಗಳ ಅರ್ಥಗಳೇನು?

ಗುರು:— ಇವುಗಳ ಅರ್ಥ ಅನುಕ್ರಮವಾಗಿ, "ಎರಡು ರಕಾತಗಳನ್ನು" "ಮೂರು ರಕಾತಗಳನ್ನು", "ನಾಲ್ಕು ರಕಾತಗಳನ್ನು" ಅಂತಾ ಆಗುತ್ತದೆ.

ಶಿಷ್ಯ:— ನಮಾಜ ಮಾಡುವದಕ್ಕಾಗಿ ಏನೇನು ಕಲಿಯಬೇಕಾಗುತ್ತದೆ?

ಗುರು: ನಮಾಜ ಮಾಡುವದಕ್ಕಾಗಿ ಅವಶ್ಯವಿದ್ದವುಗಳನ್ನು ಕಲಿತು ಬಾಯಿಪಾಠ ಮಾಡಿಕೊಳ್ಳಬೇಕಾಗುತ್ತದೆ. ಅವು ಯಾವವೆಂದರೆ:—

(೧) ದುಆಯೆ-ಕಬ್ಲುಲ್ ನಮಾಜ.
(೨) ನಿಯ್ಯತ್
(೩) ತಕ್ಬೀರ್
(೪) ಸನಾ
(೫) ತಊಜ
(೬) ತಸ್ಮಿಯಾ
(೭) ತಸ್ಬೀಹೆ-ರುಕು
(೮) ತಸ್ಮೀಯೆ-ರುಕು
(೯) ತಮ್‌ಹೀದ್
(೧೦) ತಸ್ಬೀಹೇ-ಸಿಜ್ದಾ

(೧೧) ಅತ್ತಹಿಯ್ಯಾತ್
(೧೨) ದರೂದೆ ಇಬ್ರಾಹಿಮ್
(೧೩) ದುಆಯೆ-ಮಾಸೂರಾ
(೧೪) ಸಲಾಮ್
(೧೫) ದುಆಯೆ-ಬಾದಜ್ ನಮಾಜ
(೧೬) ದುಆಯೆ-ಕುನೂತ್
(೧೭) ಸೂರೆ ಫಾತಿಹಾ
(೧೮) ಕುರಾನದಲ್ಲಿಯ ಕೆಲವು ಅಧ್ಯಾಯಗಳು (ಸೂರಾತ್)

ಮೇಲಿನ ಹದಿನೆಂಟುಗಳ ಮಜಕೂರುಗಳನ್ನು (ವಿಷಯಗಳನ್ನು) ಬಾಯಿಪಾಠವಾಗಿ ಕಲಿಯಬೇಕು. ಇವುಗಳ ಮಜಕೂರುಗಳು ಕೆಳಗಿನಂತಿರುತ್ತವೆ:-

**(೧) "ದುಆಯೆ-ಕಬ್ಲುಲ್-ನಮಾಜ":—**

"ಇನ್ನೀ ವಜ್ಜಹ್‌ತು, ವಜ್‌ಹಿಯ ಲಿಲ್ಲಜೀ, ಫತಿರಸ್ಸಮಾವಾತಿ ವಲ್ ಅರ್ದ ಹನೀಫಂವ್; ವ ಮಾ ಆನಾ ಮಿನಲ್ ಮುಶ್ರಿಕೀನ್."

ಅನು॥ ನಿಸ್ಸಂದೇಹವಾಗಿಯೂ, ಭೂವ್ಯಾಕಾಶಗಳನ್ನು ನಿರ್ಮಿಸಿದಂಥ ಪರಮಾತ್ಮನ ಎಡೆಯೇ ನಾನು ನೀಟಾಗಿ ಹೊರಳುತ್ತೇನೆ; ಮತ್ತು ಮೂರ್ತಿಪೂಜಕನು ನಾನಲ್ಲ!)

**(೨) ನಿಯ್ಯತ್:—** [ನಿಯ್ಯತದ ವಿಶಯವಾಗಿ ಹಿಂದೆ ಸವಿಸ್ತಾರವಾಗಿ ಹೇಳಿದೆ—ಲೇಖಕ].

**(೩) ತಕ್ಬೀರ್:—** "ಅಲ್ಲಾಹು ಅಕ್ಬರ್" (ಪರಮಾತ್ಮನು ದೊಡ್ಡವನಿದ್ದಾನೆ)

**(೪) ಸನಾ:—** "ಸುಬ್ಹಾನಕಲ್ಲಾಹುಮ್ಮಾ, ಬಿಹಮ್ದಿಕ ವ ತಬಾರಕಸ್ಮಕ ವ ತಆಲಾ ಜದ್ದುಕ; ವ ಲಾ ಇಲಾಹಾ ಗೈರುಕ."

ಅನು॥ ಹೇ ಪರಮಾತ್ಮಾ, ನೀನೇ ಪರಮಪಾವನನು! ನಿನ್ನನ್ನೇ ನಾವು ಸ್ತುತಿಸುವೆವು; ನಿನ್ನ ನಾಮವು ಮಂಗಳಕರವಾಗಿದೆ; ನಿನ್ನ ಶ್ರೇಷ್ಠತ್ವವು ಮಿಗಿಲಾಗಿವದ್ದಿದೆ; ಮತ್ತು ನಿನ್ನಹೊರ್ತಾಗಿ ಮತ್ತಾರೂ ಪೂಜಿತರಿಲ್ಲ!

**(೫) ತಊಜಃ—** "ಅವೂಜು ಬಿಲ್ಲಾಹಿ, ಮಿನಷ್ಷೈತಾನ್ ನಿರ್‍ರಜೀಮ್"

ಅನು॥ ಖೋಡಿ ಶೈತಾನನಿಂದ ರಕ್ಷಿಸೆಂದು ಪರಮಾತ್ಮನ ರಕ್ಷಣೆಯನ್ನು ಬೇಡುತ್ತೇನೆ.

(೬) ತಸ್ಮಿಯಾಃ— "ಬಿಸ್ಮಿಲ್ಲಾ ಹಿರ್ರಹಿಮಾ ನಿರ್ರಹೀಮ್"

ಅನು॥ ಪರಮ ದಯಾಳನೂ ದಾಕ್ಷಿಣ್ಯಮಯನೂ ಆದ ಪರಮಾತ್ಮನ ನಾಮದಿಂದ ಪ್ರಾರಂಭಿಸುತ್ತೇನೆ.

(೭) ತಸ್ಬೀಹೇ ರುಕೂಃ— "ಸುಬ್ಹಾನ ರಬ್ಬಿಯಲ್-ಅಝೀಮ್"

ಅನು॥ ಶ್ರೇಷ್ಠನಾದ ಪರಮಾತ್ಮನ ಪಾವನತೆಯನ್ನು ಬಣ್ಣಿಸುತ್ತೇನೆ.

(೮) ತಸ್ಮೀಯೇ ರುಕೂಃ— "ಸಮೀ ಅಲ್ಲಾಹು ಲಿಮನ್ ಹಮೀದ್"

ಅನು॥ ಸ್ತುತಿಸುವವನ ಕೂಗನ್ನು ಪರಮಾತ್ಮನು ಕೇಳಿಕೊಂಡನು!

(೯) ತಹ್ಮೀದಾಃ—"ರಬ್ಬನಾ ಲಕಲ್ ಹಮ್ದ್"

ಅನು॥ ಹೇ ನಮ್ಮೊಡೆಯಾ, ಸಕಲ ಸ್ತುತಿಗಳೆಲ್ಲ ನಿನಗಾಗಿಯೇ ಇವೆ!

(೧೦) ತಸ್ಬೀಹೆ-ರುಕೂಃ— "ಸುಬ್ಹಾನ ರಬ್ಬಿಯಲ್ ಆಲಾ"

ಅನು॥ ಎಲ್ಲರಿಗಿಂತಲೂ ದೊಡ್ಡವನಾದ ಪರಮಾತ್ಮನ ಪಾವನತೆಯನ್ನು ಬಣ್ಣಿಸುತ್ತೇನೆ.

(೧೧) ಅತ್ತಹಿಯ್ಯಾತ್ಃ— "ಅತ್ತಹಿಯ್ಯಾತು ಲಿಲ್ಲಾಹಿ, ವಸ್ಸೊಲವಾತು ವತ್ತೈಯ್ಯಿಬಾತು; ಅಸ್ಸಲಾಮು ಅಲೈಕ ಯಾ ಅಯ್ಯುಹನ್ನಬಿಯ್ಯು, ವ ರ್ಹಮತುಲ್ಲಾಹಿ ವ ಬರಕಾತುಹು; ಅಸ್ಸಲಾಮು ಅಲೈನಾ, ವ ಅಲಾ ಇಬಾದಿಲ್ಲಾಹಿಸ್ಸಾಲಿಹೀನ್+ ಅಷ್ಹದು ಅಲ್ ಲಾ ಇಲಾಹಾ ಇಲ್ಲಲ್ಲಾಹು; ವ ಅಷ್ಹದು ಅನ್ನ, ಮುಹಮ್ಮದನ್ ಅಬ್ದುಹು ವ ರಸೂಲುಹು"

ಮಾನವನು ಮಾಡುವಂಥ ಪ್ರಾರ್ಥನೆಗಳು ಭಾವನಾತ್ಮಕವಾದವುಗಳೇ ಇರಲಿ, ಅಥವಾ ಕ್ರಿಯಾತ್ಮಕವಾದವುಗಳೇ ಇರಲಿ, ಅಥವಾ ಸಂಪತ್ತಿನ ವಿನಿಯೋಗದ ರೂಪದಲ್ಲಿರಲಿ, ಎಲ್ಲವೂ ಪರಮಾತ್ಮನಿಗೆ ಸಲ್ಲುವವು. ಹೇ ಪೈಗಂಬರರೇ, ನಿಮಗೆ ಮಂಗಳವಾಗಲಿ! ಪರಮಾತ್ಮನ ದಯವು ಮತ್ತು ಅನುಗ್ರಹವು ನಿಮಗೆ ಲಭ್ಯವಾಗಲಿ! ನಮಗೂ ಸದ್ಭಕ್ತರೆಲ್ಲರಿಗೂ ಸಹ ಮಂಗಳವಾಗಲಿ! ಪರಮಾತ್ಮನ ಹೊರ್ತಾಗಿ ಮತ್ತಾರೂ ಪೂಜಿತರಿಲ್ಲೆಂದೂ, ಹ॥ ಮುಹಮ್ಮದ ಪೈಗಂಬರರು ದೇವಭಕ್ತಾಗ್ರಣಿ ಮತ್ತು ದೇವ ಪ್ರವಾದಿ ಇರುವರೆಂದೂ, ನಾನು ಸಾಕ್ಷಿಯನ್ನೀಯುತ್ತೇನೆ.

**(೧೨) ದರೂದೆ-ಇಬ್ರಾಹೀಮ್ :—** " ಅಲ್ಲಾಹುಮ್ಮಾ, ಸೊಲ್ಲಿ ಅಲಾ ಮುಹಮ್ಮದಿಂವ್, ವ ಅಲಾ ಆಲಿ ಮುಹಮ್ಮದಿನ್, ಕಮಾ ಸೊಲ್ಲೈತ ಅಲಾ ಇಬ್ರಾಹೀಮ್; ವ ಅಲಾ ಆಲಿ ಇಬ್ರಾಹೀಮ್; ಇನ್ನಕ ಹಮೀದುಮ್ಮಜೀದ್. ಅಲ್ಲಾಹುಮ್ಮಾ, ಬಾರಿಕ್ ಅಲಾ ಮುಹಮ್ಮದಿಂವ್ ವ ಅಲಾ ಆಲಿ ಮುಹಮ್ಮದಿನ್, ಕಮಾ ಬಾರಿಕ್ತ ಅಲಾ ಇಬ್ರಾಹೀಮ ವ ಅಲಾ ಆಲಿ ಇಬ್ರಾಹೀಮ್; ಇನ್ನಕ ಹಮೀದುಮ್ಮಜೀದ್ "

ಅನು॥ ಹೇ ಪರಮಾತ್ಮಾ, ಹ॥ ಇಬ್ರಾಹೀಮರ ಮೇಲೆ ಮತ್ತು ಅವರ ಸಂತಾನದ ಮೇಲೆ ಯಾವ ರೀತಿಯಾಗಿ ನಿನ್ನ ಕಾರುಣ್ಯವನ್ನು ಸುರಿಸಿದ್ದೆಯೋ, ಅದೇ ರೀತಿಯಾಗಿ ಹ॥ ಮುಹಮ್ಮದರ ಮೇಲೆಯೂ ಮತ್ತು ಅವರ ಸಂತಾನದ ಮೇಲೆಯೂ ನಿನ್ನ ಕಾರುಣ್ಯವನ್ನು ಸುರಿಸು; ನಿಶ್ಚಯವಾಗಿಯೂ, ಸ್ತುತಿಸಲ್ಪಡಲು ನೀನು ಅರ್ಹನಿರುವಿ ಮತ್ತು ಶ್ರೇಷ್ಠನಿರುವಿ! ಹೇ ಪರಮಾತ್ಮಾ, ಹ॥ ಇಬ್ರಾಹೀಮರಿಗೆ ಮತ್ತು ಅವರ ಸಂತಾನದವರಿಗೆ ಯಾವ ರೀತಿಯಾಗಿ ನೀನು ಅನುಗ್ರಹಗಳನ್ನು ದಯಪಾಲಿಸಿದ್ದೆಯೋ, ಅದೇ ರೀತಿಯಾಗಿ ಹ॥ ಮುಹಮ್ಮದರಿಗೆ ಮತ್ತು ಅವರ ಸಂತಾನದವರಿಗೆ ಅನುಗ್ರಹಗಳನ್ನು ದಯಪಾಲಿಸು; ನಿಸ್ಸಂದೇಹವಾಗಿ, ಸ್ತುತಿಸಲ್ಪಡಲು ನೀನು ಅರ್ಹನಿರುವಿ ಮತ್ತು ಮಿಗಿಲಾದವನಿರುವಿ!)

**(೧೩) ದುಆಯೆ–ಮಾಸೂರಾ :—**

" ಅಲ್ಲಾಹುಮ್ಮಗ್ಫಿರ್ಲೀ ವಲಿವಾಲಿದೈಯ್, ವ ಲಿಮುಂತವಾಲಿದಾವಲ್ ಉಸ್ತಾದಿಯ್ಯ, ವರ್ಹಮ್‌ಹುಮಾ ಕಮಾ ರಬ್ಬಯಾನೀ ಸೊಗೀರಂವ್; ವಗ್ಫಿರಿಲ್ಲಾಹುಮ್ಮಾ ಲಿ ಜಮೀಯಿಲ್ ಮೂಮಿನೀನ ವಲ್ ಮೂಮಿನಾತಿ, ವಲ್ ಮುಸ್ಲಿಮೀನವಲ್ ಮುಸ್ಲಿಮಾತಿ, ವಲ್ ಅಹ್ಯಾಯಿಬು ಮಿನ್ಹುಮ್ ವಲ್ ಅಮ್ವಾತಿ, ಬಿರಹ್ಮತಿಕ ಯಾ ಅರ್ರಹ್ಮರ್ರಾಹಿಮೀನ್ "

ಅನು॥ ಹೇ ಪರಮಾತ್ಮಾ, ನಮಗೂ, ನಮ್ಮ ಮಾತಾಪಿತೃಗಳಿಗೂ, ನಮ್ಮ ಮಾತಾಪಿತೃಗಳ ಪೂರ್ವಜರಿಗೂ ಮತ್ತು ನಮ್ಮ ಗುರುಗಳಿಗೂ (ಶಿಕ್ಷಕರಿಗೆ) ಕ್ಷಮೆಯನ್ನು ದಯಪಾಲಿಸು; ಮತ್ತು ಇದಲ್ಲದೆ ಹೇ ಪರಮಾತ್ಮಾ, ಇಲ್ಲಿಯ ವರೆಗೆ ಮೃತರಾಗಿ ಹೋದಂಥ ಮತ್ತು ಸದ್ಯಕ್ಕೆ ಜೀವಂತಾಗಿದ್ದ ಸಕಲ ಶ್ರದ್ಧಾವಂತರಿಗೂ, ಶ್ರದ್ಧಾವಂತಿಯರಿಗೂ, ಪರಮಾತನಾಜ್ಞಾಪಾಲಕರಿಗೂ, ಮತ್ತು ಪರಮಾತ್ಮ

ನಾಜ್ಞಾ ಪಾಲಿಕೆಯರಿಗೂ ಕ್ಷಮೆಯನ್ನು ದಯಪಾಲಿಸು; ಹೇ ಕರುಣಾನಿಧಿಯೇ, ನಿನ್ನಲ್ಲಿಯ ಕಾರುಣ್ಯಭಾಂಡಾರದಿಂದ ನಮ್ಮೆಲ್ಲರಿಗೆ ಕರುಣೆಗಳನ್ನು ದಯಪಾಲಿಸು!)

**ಅಥವಾ**

"ಅಲ್ಲಾಹುಮ್ಮಾ, ಇನ್ನೀ ಝುಲಮ್ತು ನಫ್ಸೀ ಝುಲ್ಮನ್ ಕಸೀರಂವ್ ವ ಇನ್ನಹು ಲಾ ಯುಗ್ಫಿರುಜ್ಜುನೂಬು ಇಲ್ಲಾ ಅಂತ; ಫಗ್ಫಿರ್ಲೀ ಮಗ್ಫಿರ್ತನ್ ಮಿನ್ ಇಂದಿಕ, ವರ್ಹಮ್ನಿ; ಇನ್ನಕ; ಅಂತಲ್‌ಗಫೂರುರ್ರಹೀಮ್"

ಅನು ॥ ಹೇ ಪರಮಾತ್ಮಾ, ನನ್ನ ಮೇಲೆ (ಅಂದರೆ ನನ್ನ ಆತ್ಮದ ಮೇಲೆ) ಮಹತ್ತರವಾದ ಅನ್ಯಾಯಗಳಿಂದ ನಾನು ಅನ್ಯಾಯ ಮಾಡಿರುವೆನು! ನಿಸ್ಸಂದೇಹವಾಗಿಯೂ, ತಪ್ಪುಗಳನ್ನು ಕ್ಷಮಿಸುವಂಥವನು ನಿನ್ನ ಹೊರತಾಗಿ ಮತ್ತಾರಿಲ್ಲ! ಆದ್ದರಿಂದ, ನಿನ್ನಲಿಯ ಕ್ಷಮಾಭಾಂಡಾರದಿಂದ ನನಗೆ ಕ್ಷಮಾಭಿಕ್ಷೆಯನ್ನು ನೀಡು; ಮತ್ತು ನನ್ನ ಮೇಲೆ ದಯೆದೋರು! ನಿಸ್ಸಂದೇಹವಾಗಿ, ನೀನೇ ಕ್ಷಮಾಪತಿ! ನೀನೇ ಕಾರುಣ್ಯನಿಧಿ!)

## (೧೪) ಸಲಾಮ್:—

"ಅಸ್ಸಲಾಮು ಅಲೈಕುಮ್ ರಹಮತುಲ್ಲಾಹ್"

ಅನು॥ ನಿಮಗೆ ಮಂಗಳವಾಗಲಿ! ಮತ್ತು ಪರಮಾತ್ಮನ ಅನುಗ್ರಹವಿರಲಿ!

## (೧೫) ದುಆಯೆ-ಬಾದಜ್ ನಮಾಜ:—

ಅಲ್ಲಾಹುಮ್ಮಾ ಅಂತಸ್ಸಲಾಮು ವ ಮಿನ್ಕಸ್ಸಲಾಮು, ವ ಇಲೈಕ ಯರ್ಜಿವುಸ್ಸಲಾಮ್; ಫ ಹಯ್ಯಿನಾ ರಬ್ಬನಾ ಬಿಸ್ಸಲಾಮಿ, ವ ಅದ್ಖಿಲ್ನಾ ದಾರಸ್ಸಲಾಮ್+ತಬಾರಕ್ತ ರಬ್ಬನಾ, ವ ತಾಲೈತ ಯಾ ಜಲ್‌ಜಲಾಲಿ ವಲ್ ಇಕ್ರಾಮ್; ಬಿ ರ್ರಹ್ಮತಿಕ ಯಾ ಅರ್ರಹಮುರ್ರಾಹಿಮೀನ್"

ಅನು ॥ ಹೇ ಪರಮಾತ್ಮಾ ನೀನೇ ಕಲ್ಯಾಣಸ್ವರೂಪನು! ಸಕಲ ಕಲ್ಯಾಣಗಳು ನಿನ್ನಿಂದಲೇ! ನಮ್ಮ ಕಲ್ಯಾಣಕ್ಕಾಗಿ ನಿನ್ನೆಡೆಯೇ ನಾವು ಹೊರಳುವೆವು; ಆದ್ದರಿಂದ ಹೇ ಪ್ರಭುವೇ, ನಮ್ಮನ್ನು ಕ್ಷೇಮದಿಂದ ಜೀವಂತಿಡು; ಮತ್ತು (ನ್ಯಾಯದಾನದ ದಿವಸ) ನಮಗೆ ಸ್ವರ್ಗದಲ್ಲಿ ಪ್ರವೇಶ ನೀಡು, ಹೇ ಪ್ರಭುವೇ, ನೀನು ಸದಾ ಮಂಗಲಸ್ವರೂಪನು! ಹೇ ಸರ್ವಶಕ್ತಿ ಸಂಪನ್ನನೇ, ನೀನು ಮಹಾ ಮಿಗಿಲಾದವನು!! ಹೇ ಕರುಣಾನಿಧಿಯೇ, ನಿನ್ನಲ್ಲಿಯ ಕಾರುಣ್ಯಭಾಂಡಾರದಿಂದ ನಮಗೆ ಕರುಣೆಯನ್ನು ದಯಪಾಲಿಸು!!!

## (೧೬) ದುಆಯೆ-ಕುನೂತ್:—

“ಅಲ್ಲಾಹುಮ್ಮಾ ಇನ್ನಾ ನಸ್ತಯೀನುಕ ವ ನಸ್ತಗ್ಫಿರುಕ, ವ ನೂಮಿನು ಬಿಕ ವ ನತವಕ್ಕಲು ಅಲೈಕ, ವ ನುಸ್ನೀ ಅಲೈಕಲ್‌ಖೈರ್; ವ ನಷ್ಕುರುಕ ವ ಲಾ ತಕ್ಫುರುಕ, ವ ನಖ್ಲವು ವ ನತ್ರುಕ ಮಂಯ್ ಯಫ್ಜುರುಕ್+ ಅಲ್ಲಾಹುಮ್ಮಾ, ಇಯ್ಯಾಕ ನಅಬುದು, ವ ಲಕ ನುಸೊಲ್ಲಿ ವ ನಸ್‌ಜುದು, ವ ಇಲೈಕ ನಸ್‌ಆ ವ ನಹ್ಫಿದು, ವ ನರ್ಜೂ ರ್ಹಮತಿಕ ವ ನಖ್ಷಾ ಅಜಾಬಕ; ಇನ್ನ ಅಜಾಬಕ ಬಿಲ್ಕುಫ್ಫಾರಿ ಮುಲ್‌ಹಿಕ್+”

ಅನು॥ ಹೇ ಪರಮಾತ್ಮಾ, ನಿನ್ನ ಸಹಾಯವನ್ನೇ ನಾವು ಯಾಚಿಸುತ್ತೇವೆ, ನಿನ್ನಿಂದಲೇ ಕ್ಷಮಾಭಿಕ್ಷೆ ಬೇಡುತ್ತೇವೆ, ನಿನ್ನಲ್ಲಿಯೇ ಶ್ರದ್ಧೆಯನ್ನಿಡುತ್ತೇವೆ, ನಿನ್ನನ್ನೇ ಆಶ್ರಯಿಸುತ್ತೇವೆ, ನಿನ್ನನ್ನೇ ಸ್ತುತಿಸುತ್ತೇವೆ, ನಿನ್ನ ಉಪಕಾರಗಳನ್ನು ನೆನೆಯುತ್ತಲೇ ಇರುತ್ತೇವೆಯಲ್ಲದೆ ನಿನಗೆ ಕೃತಘ್ನರಾಗುವದಿಲ್ಲ; ಮತ್ತು ನಿನ್ನನ್ನು ವಿರೋಧಿಸುವವರಿಂದ ದೂರಾಗಿಯೇ ಉಳಿದು, ಅವರ ಸಹವಾಸವನ್ನು ಬಿಟ್ಟುಬಿಡುತ್ತೇವೆ. ಹೇ ಪರಮಾತ್ಮಾ, ನಿನ್ನನ್ನೇ ನಾವು ಪೂಜಿಸುವೆವು, ನಿನ್ನನ್ನೇ ಸ್ತುತಿಸುವೆವು, ನಿನಗೇ ಸಾಷ್ಟಾಂಗವೆರಗುವೆವು, ನಿನ್ನಲ್ಲಿಗೇ ಧಾವಿಸಿ ಬರುವೆವು, ನಿನ್ನನ್ನೇ ಅಪ್ಪಿಕೊಳ್ಳುವೆವು, ನಿನ್ನ ಕಾರುಣ್ಯದ ಉಮ್ಮೇದವಾರರಾಗುವೆವು, ಮತ್ತು ನಿನ್ನ ರೌದ್ರತೆಯ ಬಗ್ಗೆ ಅಂಜಿಕೆಯನ್ನು ತಳೆಯುವೆವು; ನಿಸ್ಸಂದೇಹವಾಗಿ, ನಿನ್ನ ರೌದ್ರತೆಯು ಕಾಫಿರ ಜನರಿಗಾಗಿಯೇ ಮೀಸಲಾಗಿದೆ!

## (೧೭) ಸೂರೆ-ಫಾತಿಯಾ:—

“ಅಲ್‌ಹಮ್ದು ಲಿಲ್ಲಾಹಿ ರಬ್ಬಿಲ್ ಆಲಮೀನ್-ಅರ್ರ್‍ರಹಮಾ ನಿರ್ರ್‍ರಹೀಮಿ ಮಾಲಿಕಿ ಯೌಮಿದ್ದೀನ್-(೩)-ಇಯಾಕ ನಅಬುದು. ವ ಇಯ್ಯಾಕ ನಸ್ತಯೀನ್-(೪)-ಇಹ್ದಿನಸ್ಸಿರಾತೊಲ್ ಮುಸ್ತಕೀಮ-(೫)-ಸಿರಾತೊಲ್ಲಜೀನ ಅನ್‌ಅಮ್ತ ಅಲೈಹಿಮ್-(೬)-ಗೈರುಲ್ ಮಗ್ದೂಬಿ ಅಲೈಹಿಮ್, ವಲದ್‌ದ್ಧಾಲ್ಲೀ....ನ್-(೭)”

ಅನು|| ಸರ್ವ ಸ್ತುತಿಗಳೆಲ್ಲ ಸಲ್ಲುವವು ಮಹಾದೇವನಿಗೆ |
ಸಕಲ ಲೋಕಗಳ ಒಡೆಯನಿಗೆ, ಕರುಣಾನಿಧಿಗೆ |
ದಯಾಸಾಗರನಿಗೆ, ನ್ಯಾಯದಿನದ ಒಡೆಯನಿಗೆ || ೩ ||
ಪೂಜಿಸುವೆವು ಪ್ರಭುವೇ ನಿನ್ನನೇ ನಾವು |
ವ ಬೇಡುವೆವು ನಿನ್ನಿಂದಲೇ ಸಹಾಯವ ನಾವು || ೪ ||

ತೋರಿಸು ಎಮಗೆ ದೇವಾ ಸನ್ಮಾರ್ಗವನು |
ನಿನ್ನಾನುಗ್ರಹವಂ ಪಡೆದವರ ನಿಜದಾರಿಯನು || ೬ ||
ಬೇಡೆಮಗೆ ಆ ಮಾರ್ಗ ನೀ ಕೋಪಿಸುತಿಹ ಜನರದು |
ವ ಮಾರ್ಗವ ತಪ್ಪಿ ನಡೆಯುತಲಿರ್ಪ ಮಾನವರದು || ೭ ||

## (೧೪) ಕುರಾನದಲ್ಲಿಯ ಅದ್ಯಾಯಗಳು:—

[ಕುರಾನದ ಕೆಲವು ಅಧ್ಯಾಯಗಳನ್ನು, ಅನುವಾದ ಸಹಿತವಾಗಿ, ಈ ಗ್ರಂಥದ ಕೊನೆಯ ಭಾಗದಲ್ಲಿ ಕೊಡಲಾಗಿದೆ.-ಲೇಖಕ]

### —ವಜೂ—

ಶಿಷ್ಯ:—ನಮಾಜ ಮಾಡುವದಕ್ಕಿಂತ ಮೊದಲು ಕೈಕಾಲು ಮುಖಗಳನ್ನು ತೊಳೆದುಕೊಳ್ಳುತ್ತಾರಲ್ಲವೇ? ಅದಕ್ಕೆ ಏನೆನ್ನುತ್ತಾರೆ ?

ಗುರು:—ಅದಕ್ಕೆ "ವಜೂ" ಅನ್ನುತ್ತಾರೆ. ವಜೂ ಇಲ್ಲದಲೆ ನಮಾಜ ಮಾಡಬಾರದು

ಶಿಷ್ಯ:— ವಜೂ ಹೇಗೆ ಮಾಡುತ್ತಾರೆ? ಅದರ ವಿಧಾನವನ್ನು ವಿವರಿಸುವಿರಾ ?

ಗುರು:—ಸ್ವಚ್ಛವಾದ ಪಾತ್ರೆಯಲ್ಲಿ ಸ್ವಚ್ಛವಾದ ನೀರು ತೆಗೆದುಕೊಂಡು, ಸ್ವಚ್ಛವಾದ ಮತ್ತು ಸಲ್ಪ ಎತ್ತರವಾದ ಸ್ಥಳದಲ್ಲಿ (ಶಕ್ಯವಿದ್ದರೆ ಕಾಬಾದ ದಿಕ್ಕಿನೆಡೆ ಮುಖವನ್ನು ಮಾಡಿ) ಕುಳಿತು, ಅಂಗಿಯ ಅಥವಾ ಕೋಟಿನ ತೋಳುಗಳನ್ನು ರಟ್ಟೆಯ ವರೆಗೆ ಮೇಲಕ್ಕೆ ಏರಿಸಿ, 'ಬಿಸ್ಮಿಲ್ಲಾಹ್' ಅಂತಾ ಪಠಿಸುತ್ತ (೧) ಎರಡೂ ಮುಂಗೈಗಳನ್ನು ಮೂರು ಸಾರೆ ತೊಳೆದುಕೊಳ್ಳಬೇಕು, (೨) ಆ ನಂತರ ಹಲ್ಲು ವಸಡೆಗಳನ್ನು ಬಲಗೈಬೆರಳಿನಿಂದ ತಿಕ್ಕುತ್ತ ಮೂರು ಸಾರೆ ಬಾಯಿ ತೊಳೆದುಕೊಳ್ಳಬೇಕು, (೩) ಆ ನಂತರ ಮೂಗಿನ ಹೊರಳೆಗಳಲ್ಲಿ ತುಸು ನೀರು ಏರಿಸಿ, ಎಡಗೈ ಕಿರಿಬೆರಳು ಮತ್ತು ಹೆಬ್ಬೆರಳುಗಳ ಸಹಾಯದಿಂದ ಹೊರಳೆಗಳನ್ನು ಮೂರು ಸಾರೆ ಚೆನ್ನಾಗಿ ತೊಳೆದುಕೊಳ್ಳಬೇಕು, (೪) ತದನಂತರ ಮೂರು ಸಾರೆ ಮುಖವನ್ನು ತೊಳೆದುಕೊಂಡು, (೫) ಬಲಗೈ ಎಡಗೈಗಳನ್ನು, ಮೊಣಕೈಗಂಡುಗಳ ವರೆಗೆ, ಮೂರು ಮೂರು ಸಾರೆ ತೊಳೆದುಕೊಳ್ಳಬೇಕು, (೬) ಆ ಮೇಲೆ ಎರಡೂ

ಹಸ್ತಗಳನ್ನು ನೀರಿನಿಂದ ಒದ್ದೆ ಮಾಡಿಕೊಂಡು, ಒದ್ದೆಯಾದ ಅಂಗೈಗಳಿಂದ ತಲೆಯನ್ನೆಲ್ಲ—ಮುಂಬದಿಯಿಂದ ಹಿಂಬದಿಯ ವರೆಗೆ—ಸವರಿಕೊಂಡು, ತೋರ್ ಬೆರಳುಗಳಿಂದ ಆ ಆ ಕಿವಿ-ಹಾಲೆಗಳ ಮುಂಭಾಗವನ್ನೂ ಮತ್ತು ಹೆಬ್ಬೆರಳುಗಳಿಂದ ಹಿಂಭಾಗವನ್ನೂ ಸವರಿಕೊಂಡು, ಮುಂಗೈಗಳ ಹಿಂಬದಿಗಳಿಂದ ಗೋಣು ಸವರಿಕೊಳ್ಳಬೇಕು (ತಲೆ., ಕಿವಿ ಮತ್ತು ಗೋಣುಗಳನ್ನು ಹೀಗೆ ಸವರಿಕೊಳ್ಳುವದಕ್ಕೆ 'ಮಸಾ' ಅನ್ನುತ್ತಾರೆ.); ಆ ನಂತರ (೬) ಮೊದಲು ಬಲಪಾದವನ್ನೂ ನಂತರ ಎಡಪಾದವನ್ನೂ, ಹರಡುಗಳ ವರೆಗೆ, ಮೂರು ಮೂರು ಸಾರೆ ಎಡಗೈಯಿಂದ ತೊಳೆದುಕೊಳ್ಳಬೇಕು. ಇಷ್ಟೆಲ್ಲವಾದರೆ ವಜೂ ಪೂರ್ಣವಾದಂತಾಯಿತು.

ಶಿಷ್ಯ:—ಪ್ರತಿ ನಮಾಜದ ವೇಳೆಗೂ ಹೀಗೆಯೇ ವಜೂ ಮಾಡಬೇಕೇ?

ಗುರು:—ಅಹುದು; ವಜೂ ಮಾಡುವದು ಅವಶ್ಯವಿದ್ದದ್ದಾದರೆ, ಅಂದರೆ, ಒಮ್ಮೆ ಮಾಡಿದಂಥ ವಜೂ ನಾಶವಾಗಿದ್ದರೆ, ಪ್ರತಿ ನಮಾಜದ ವೇಳೆಗೂ ಹೀಗೆಯೇ ವಜೂ ಮಾಡಬೇಕು. ಆದರೆ, ಒಮ್ಮೆ ಮಾಡಿದಂಥ ವಜೂ ನಾಶವಾಗಿರದಿದ್ದರೆ, ಅಂದರೆ, ಸ್ಥಿರವಾಗಿ ಉಳಿದಿದ್ದರೆ, ಪ್ರತಿ ನಮಾಜದ ವೇಳೆಗೂ ವಜೂ ಮಾಡುವ ಅವಶ್ಯಕತೆ ಇಲ್ಲ.

ಶಿಷ್ಯ:—ಒಮ್ಮೆ ಮಾಡಿದಂಥ ವಜೂ ಹೇಗೆ ನಾಶವಾಗುತ್ತದೆ ?

ಗುರು:—ಎಂಟು ಕಾರಣಗಳಿಂದಾಗಿ ವಜೂ ನಾಶವಾಗುತ್ತದೆ, ಆ ಎಂಟು ಕಾರಣಗಳು ಯಾವವೆಂದರೆ—

(೧) ಮಲಮೂತ್ರಗಳ ವಿಸರ್ಜನೆಯಾದರೆ, ಅಥವಾ ಮಲಮೂತ್ರ ದ್ವಾರಗಳಿಂದ ಏನಾದರೂ ಹೊರಬಂದರೆ.

(೨) ಮಲದ್ವಾರದಿಂದ ಹವೆಯು ಹೊರಬಂದರೆ.

(೩) ಶರೀರದ ಯಾವದೇ ಭಾಗದಿಂದ ರಕ್ತವು ಹೊರಬಂದು ಹರಿದರೆ.

(೪) ಬಾಯಿ ತುಂಬುವಷ್ಟು ವಾಂತಿಯಾದರೆ.

(೫) ಮಿದುಳಿನ ಸಮತೋಲನೆ ತಪ್ಪಿದರೆ (ಅಂದರೆ, ಭಯಂಕರ ಸಿಟ್ಟು ಬಂದರೆ, ದುಃಖತುಂಬಿ ಅಳಹತ್ತಿದರೆ, ಭ್ರಮಿಷ್ಟರಾದರೆ).

(೬) ಯಾವದೇ ಕಾರಣದಿಂದ ಮೂರ್ಛಿತರಾದರೆ, ಅಂದರೆ, ಬೇಹೋಷ್ ಆದರೆ.

(೭) ಮಲಗಿ, ಅಥವಾ ಯಾವದಾದರೊಂದು ವಸ್ತುವಿಗೆ ಒರಗಿ ನಿದ್ರೆ ಮಾಡಿದರೆ.

(೮) ನಮಾಜ ಮಾಡುವಾಗ ಗಹಗಹಿಸಿ ನಕ್ಕರೆ, ಅಥವಾ ಚೀರಾಡಿದರೆ.

## —ತಯಮ್ಮುಮ್—

ಶಿಷ್ಯ:—ಯಾವದೇ ಅನಿವಾರ್ಯ ಕಾರಣದ ಮೂಲಕ ವಜೂ ಮಾಡುವದು ಶಕ್ಯವಾಗದಿದ್ದರೆ, ವಜೂ ಇಲ್ಲದಲೇ ನಮಾಜ ಮಾಡಲಿಕ್ಕೆ ಬರುತ್ತದೆಯೋ?

ಗುರು:—ಕೆಳಗಿನ ಮೂರು ಕಾರಣಗಳಿಗಾಗಿ ವಜೂ ಮಾಡುವದು ಶಕ್ಯವಾಗದಿದ್ದರೆ, ವಜೂವ ಬದಲಾಗಿ "ತಯಮ್ಮುಮ್" ಮಾಡಿಕೊಂಡು ನಮಾಜ ಮಾಡಲಿಕ್ಕೆ ಬರುತ್ತದೆ; ಆದರೆ ತಯಮ್ಮುಮ್ ಮಾಡಿಕೊಳ್ಳದಲೇ ನಮಾಜ ಮಾಡಬಾರದು. ಆ ಮೂರು ಕಾರಣಗಳು ಯಾವವೆಂದರೆ—

(೧) ಪ್ರವಾಸ ಕಾಲದಲ್ಲಿ ನಮಾಜದ ವೇಳೆಯಾದಾಗ, ಮೂರು ಮೈಲುಗಳ ಅಂತರದೊಳಗೆ ನೀರು ಸಿಗಲಾರದೆಂಬುದು ಖಚಿತವಾದರೆ.

(೨) ರೋಗ, ಗಾಯ, ಹುಣ್ಣು ಮೊದಲಾದವುಗಳ ಕಾರಣಗಳಿಗಾಗಿ, ವಜೂ ಮಾಡುವಾಗ ತೊಳೆಯಲ್ಪಡಲೇಬೇಕಾದ ಯಾವದೇ ಅವಯವವು ತೊಳೆಯಲ್ಪಡುವ ಪರಿಸ್ಥಿತಿಯಲ್ಲಿ ಇಲ್ಲದಿದ್ದರೆ.

(೩) ಮೇಲಿನ ಎರಡೂ ಕಾರಣಗಳು ಇಲ್ಲದಿದ್ದರೂ ಸಹ, ನಮಾಜೆ-ಜುಮ್ಮಾ, ನಮಾಜೆ-ಈದುಲ್‌ಫಿತ್ರ ಮತ್ತು ನಮಾಜೆ-ಈದುದ್ದುಹಾ, ಈ ಮೂರು ಸಾಮೂಹಿಕ ಪ್ರಾರ್ಥನೆಗಳಲ್ಲಿ ಭಾಗವಹಿಸಲು ವೇಳೆಯ ಅಭಾವವು ಇದ್ದದ್ದಾದರೆ.

ಶಿಷ್ಯ:—"ತಯಮ್ಮುಮ್" ಅಂದರೆ ಏನು?

ಗುರು:—ಸ್ವಚ್ಛವಾದ ನೆಲದ ಮೇಲೆ ಹಸ್ತಗಳನ್ನು ಅಪ್ಪಳಿಸಿ, ಹಸ್ತಗಳಿಗೆ ಹತ್ತಿದ ಮಣ್ಣಿನ ಹುಡಿಯಿಂದ ಮುಖ ಮತ್ತು ಕೈಗಳನ್ನು ವರಿಸಿಕೊಳ್ಳುವದಕ್ಕೆ "ತಯಮ್ಮುಮ್" ಅನ್ನುತ್ತಾರೆ, ತಯಮ್ಮುಮ್ ಮಾಡುವ ಪದ್ಧತಿಯು ಹೀಗೆ ಇರುತ್ತದೆ—

ತಯಮ್ಮುಮ್ಮದ ಉದ್ದೇಶ ವಿವರಣೆಯನ್ನು [ನಿಯ್ಯತ್] ಮಾಡಿದ ನಂತರ, ಎರಡೂ ಹಸ್ತಗಳನ್ನು ಸ್ವಚ್ಛವಾದ ಮತ್ತು ಒಣಗಿದ ನೆಲದ ಮೇಲೆ ಅಪ್ಪಳಿಸಬೇಕು. ಆ ಮೇಲೆ ಎರಡೂ ಹಸ್ತಗಳನ್ನು ಮುಖದ ತುಂಬೆಲ್ಲ ಆಡಿಸಿಕೊಳ್ಳಬೇಕು. ಆ ನಂತರ ಎರಡೂ ಕೈಗಳನ್ನು ಮತ್ತೆ ನೆಲದ ಮೇಲೆ ಅಪ್ಪಳಿಸಿ, ಎಡಗೈಯಿಂದ ಬಲಗೈಯನ್ನೂ ಬಲಗೈಯಿಂದ ಎಡಗೈಯನ್ನೂ [ಬೆರಳುಗಳಿಂದ ಹಿಡಿದು ಮೊಣಕೈಗಳ ವರೆಗೆ] ಸಂಪೂರ್ಣವಾಗಿ ವರಿಸಿಕೊಳ್ಳಬೇಕು. ಬೆರಳುಗಳಲ್ಲಿ ಉಂಗುರುಗಳಿದ್ದರೆ, ಅಥವಾ ಹೆಂಗಸರ ಕೈಗಳಲ್ಲಿ ಬಳೆಗಳಿದ್ದರೆ, ಉಂಗುರ ಅಥವಾ ಬಳೆಗಳನ್ನು ಬದಿಗೆ ಸರಿಸಿ, ಆ ಸ್ಥಳಗಳನ್ನೂ ಒರಿಸಿಕೊಳ್ಳಬೇಕು.

ಶಿಷ್ಯ:—ತಯಮ್ಮುಮ್ಮದ ನಿಯ್ಯತ್ ಹೇಗೆ ಮಾಡಬೇಕು ?

ಗುರು:— ತಯಮ್ಮುಮ್ಮದ ನಿಯ್ಯತವನ್ನು ಹೀಗೆ ಪಠಿಸಬೇಕು—

"ನವೈತು ಅನ್ ಅತಯಮ್ಮಮು ಲಿ ರಫಯಿಲ್ ಹದಸ್"

ಶಿಷ್ಯ:—ತಯಮ್ಮುಮ್ ಮಾಡುವದು ಅನಿವಾರ್ಯವಿದ್ದ ಕಾಲದಲ್ಲಿ, ಪ್ರತಿ ನಮಾಜದ ವೇಳೆಗೂ ತಯಮ್ಮುಮ್ ಮಾಡಬೇಕೇನು?

ಗುರು:—ಒಮ್ಮೆ ಮಾಡಿದಂಥ ತಯಮ್ಮುಮ್ ನಾಶವಾಗಿದ್ದರೆ, ಪ್ರತಿ ನಮಾಜದ ವೇಳೆಗೂ ತಯಮ್ಮುಮ್ ಮಾಡಲೇಬೇಕು; ಆದರೆ, ನಾಶವಾಗಿರದಿದ್ದರೆ ಪ್ರತಿ ನಮಾಜದ ವೇಳೆಗೂ ತಯಮ್ಮುಮ್ ಮಾಡುವ ಅವಶ್ಯಕತೆ ಇಲ್ಲ. ಯಾವ ಕಾರಣಗಳಿಂದಾಗಿ ವಜೂ ನಾಶವಾಗುತ್ತದೆಯೋ, ಅವೇ ಕಾರಣಗಳಿಂದಾಗಿ ತಯಮ್ಮುಮ್ ಸಹ ನಾಶವಾಗುತ್ತದೆ.

## —ಇಸ್ತಿಂಜಾ—

ಶಿಷ್ಯ:—"ಇಸ್ತಿಂಜಾ" ಅಂದರೆ ಏನು?

ಗುರು:—ಮಲಮೂತ್ರಗಳ ವಿಸರ್ಜನೆಯ ನಂತರ, ಆ ಆ ಅವಯವ ಗಳಿಗೆ ಹತ್ತಿದ ಮಲಮೂತ್ರಗಳನ್ನು ನೀರಿನಿಂದ ಸ್ವಚ್ಛವಾಗಿ ತೊಳೆದುಕೊ ಳ್ಳುವದಕ್ಕೆ 'ಇಸ್ತಿಂಜಾ' ಅನ್ನುತ್ತಾರೆ.

ಶಿಷ್ಯ:—ಮೂತ್ರ ವಿಸರ್ಜನೆಯ ನಂತರ, ಇಸ್ತಿಂಜಾ ಹೇಗೆ ಮಾಡ ಬೇಕು?

ಗುರು:—ಮೂತ್ರ ವಿಸರ್ಜನೆಯ ನಂತರ, ಸ್ವಚ್ಛವಾದ ಮಣ್ಣಿನ ಹೆಂಡಿಯನ್ನು ಎಡಗೈಯಲ್ಲಿ ಹಿಡಿದು, ಮೂತ್ರದ್ವಾರದ ತುದಿಗೆ ಆನಿಸಿ, ಮೂತ್ರದ ಹನಿಗಳನ್ನು ಆರಿಸಬೇಕು. ಆ ಮೇಲೆ ಮೂತ್ರಾಯವದ ಮುಂಭಾ ಗವನ್ನು ಸ್ವಚ್ಛವಾದ ನೀರಿನಿಂದ ಎಡಗೈಯಿಂದ ತೊಳೆದುಕೊಳ್ಳಬೇಕು.

ಶಿಷ್ಯ:—ಮಲ-ವಿಸರ್ಜನೆಯ ನಂತರ ಇಸ್ತಿಂಜಾ ಹೇಗೆ ಮಾಡ ಬೇಕು?

ಗುರು:—ಮಲ-ವಿಸರ್ಜನೆಯ ನಂತರ, ಹೆಂಡೆಯಿಂದಾಗಲೀ ಅಥವಾ ಕಲ್ಲಿನಿಂದಾಗಲೀ ಮಲದ್ವಾರವನ್ನು ಮೂರು ನಾಲ್ಕು ಸಾರೆ [ಬೇರೆ ಬೇರೆ ಹೆಂಡೆಗಳಿಂದ] ವರಿಸಿಕೊಂಡು, ಸ್ವಚ್ಛವಾದ ನೀರಿನಿಂದ ಎಡಗೈಯಿಂದ ಬೇಕು.

## —ಗುಸ್ಲ—

ಶಿಷ್ಯ:—"ಗುಸ್ಲ" ಅಂದರೆ ಏನು?

ಗುರು:—ನೇಮುಗಳಿಗೆ ಅನುಗುಣವಾಗಿ ಸ್ನಾನ ಮಾಡುವದಕ್ಕೆ ಗುಸ್ಲ ಅನ್ನುತ್ತಾರೆ. ಕಾಮುಸಂಭೋಗದ ನಂತರ, ಅಥವಾ ಯಾವದೇ ಕಾರಣ ದಿಂದ ವೀರ್ಯ-ವಿಸರ್ಜನೆಯಾದರೆ ಗುಸ್ಲ ಮಾಡಲೇಬೇಕಾಗುತ್ತದೆ. ಸ್ತ್ರೀಯರು ಕಡೆಗಾದ ನಂತರ (ಅಂದರೆ ಮಾಸಿಕ ಮುಟ್ಟು ಮುಗಿದ ನಂತರ), ಅಥವಾ ಪ್ರಸೂತಿಯ ನಂತರದ ರಕ್ತ-ಸ್ರಾವವು ನಿಂತ ನಂತರ ಗುಸ್ಲ ಮಾಡಲೇಬೇಕಾಗುತ್ತದೆ. ಗುಸ್ಲ ಮಾಡುವ ಪದ್ಧತಿಯು ಹೀಗಿರುತ್ತದೆ:— ಮೊದಲು ಎರಡೂ ಮುಂಗೈಗಳನ್ನು ಸ್ವಚ್ಛವಾಗಿ ತೊಳೆದುಕೊಂಡು, ಆ ಮೇಲೆ ಶರೀರದ ಮೇಲೆ ಎಲ್ಲೆಲ್ಲಿ ಮಲಿಣತೆ ಇರುವದೋ ಅವನ್ನೆಲ್ಲ ಸ್ವಚ್ಛ ವಾಗಿ ತೊಳೆದುಕೊಳ್ಳಬೇಕು. ಆ ನಂತರ ವಜೂ ಮಾಡಬೇಕು. ವಜೂ

ಮಾಡಿದ ನಂತರ ಗುಸ್ಲದ ನಿಯ್ಯತ್ ಮಾಡಬೇಕು (ಅಂದರೆ ಗುಸ್ಲದ ಉದ್ದೇಶವಿವರಣೆಯನ್ನು ಮಾಡಬೇಕು). ತದನಂತರ ಇಡೀ ಶರೀರವನ್ನು ಮೂರು ಸಾರೆ ಚನ್ನಾಗಿ ತೊಳೆದುಕೊಳ್ಳಬೇಕು. ಆ ಮೇಲೆ ಮೂಗಿನ ಹೊರಳೆಗಳನ್ನು ಚನ್ನಾಗಿ ತೊಳೆದುಕೊಂಡು ಬಾಯಿ ತೊಳೆದುಕೊಳ್ಳಬೇಕು.

ಶಿಷ್ಯ:—"ಗುಸ್ಲದ ನಿಯ್ಯತ್ ಮಾಡಬೇಕು" ಅಂದರೆ ಏನು? ಮತ್ತು ಅದನ್ನು ಹೇಗೆ ಮಾಡಬೇಕು?

ಗುರು:—ಕಾಮಸಂಭೋಗದಿಂದ, ವೀರ್ಯಸ್ಖಲನದಿಂದ, ಸ್ತ್ರೀಯರು ಕಡೆಗಾಗುವದರಿಂದ ಮತ್ತು ಪ್ರಸೂತಾನಂತರದ ರಕ್ತಸ್ರಾವದಿಂದ ಶರೀರವು ಮೈಲಿಗೆಯಾಗುತ್ತದೆ, ಅಂದರೆ, ಅಪವಿತ್ರವಾಗುತ್ತದೆ. ಶರೀರವು ಅಪವಿತ್ರವಾದಾಗ ಯಾವದೇ ಧಾರ್ಮಿಕ ಕೆಲಸಗಳನ್ನು, ಅಂದರೆ, ನಮಾಜ ರೋಜಾ ಮೊದಲಾದವುಗಳನ್ನು, ಮಾಡಲಿಕ್ಕೆ ಬರುವದಿಲ್ಲ. ಆದ್ದರಿಂದ, ಅಪವಿತ್ರತೆಯನ್ನು ದೂರು ಮಾಡುವದಕ್ಕಾಗಿ ಗುಸ್ಲ ಮಾಡಲೇಬೇಕಾಗುತ್ತದೆ. ಇದಲ್ಲದೆ, ಶರೀರದ ಮೇಲೆ ಯಾವದೇ ತರದ ಅಪವಿತ್ರತೆಯು ಇಲ್ಲದಿದ್ದರೂ ಸಹ, ನಮಾಜೆ-ಜುಮ್ಮಾ, ನಮಾಜೆ-ಈದೈನ ಮೊದಲಾದ ಸಂದರ್ಭಗಳಲ್ಲಿ ಗುಸ್ಲ ಮಾಡಬೇಕಾಗುತ್ತದೆ. ಆದ್ದರಿಂದ, ಯಾವ ಉದ್ದೇಶಕ್ಕಾಗಿ ಗುಸ್ಲ ಮಾಡಬೇಕಾಗಿದೆಯೋ, ಆ ಉದ್ದೇಶದ ವಿವರಣೆಯನ್ನು ಮಾಡುವದಕ್ಕೆ "ಗುಸ್ಲದ ನಿಯ್ಯತ್" ಅನ್ನುತ್ತಾರೆ. ಗುಸ್ಲದ ನಿಯ್ಯತ್ ಹೀಗಿರುತ್ತದೆ:—

"ನವೈತು ಅನ್ ಅಗ್ತಸಿಲ ಮಿನ್ ಗುಸ್ಲಿಲ್....(೧)....ಇಮ್ತಿಸಾಲನ್ ಲಿ ಅಮರಿಲ್ಲಾಹಿ ತಆಲಾ ವ ತಹಾರತನ್ ಲಿಲ್ ಬದನಿ, ವ ಇಸ್ತಿಬಾಹತಿಸ್ಸೊಲಾತಿ, ವ ರಫಯಿಲ್ ಹದಸ್"

(ಟಿಪ್ಪಣಿ:— ಜನಾಬತಿ (ಸಂಭೋಗ), ಎಹ್ತಲಾಮಿ (ವೀರ್ಯಸ್ಖಲನ), ಹೈಜ (ಮಾಸಿಕ ಮುಟ್ಟು), ನಿಫಾಸ್ (ಪ್ರಸೂತಾನಂತರದ ರಕ್ತಸ್ರಾವ), ಜುಮಾಅತಿ (ಶುಕ್ರವಾರ), ಈದುಲ್-ಫಿತ್ರ (ರಮ್ಜಾನಹಬ್ಬ), ಈದುದ್ದುಹಾ (ಬಕ್ರೀದಹಬ್ಬ), ನಿಕಾಹ (ಮದುವೆ) ಮೊದಲಾದವುಗಳಲ್ಲಿ ಯಾವ ಪ್ರಸಂಗವಿದೆಯೋ, ಅದನ್ನು (....೧....) ಇಲ್ಲಿ ಅನ್ನಬೇಕು.)

ಶಿಷ್ಯ:—ಮೇಲೆ ಹೇಳಿದ ಪ್ರಸಂಗಗಳ ಹೊರ್ತಾಗಿ ಇತರ ವೇಳೆಯಲ್ಲಿ ಗುಸ್ಲ ಮಾಡಬಾರದೇನು?

ಗುರು:—ಹಾಗೇನೂ ಅಲ್ಲ; ಮನಸ್ಸಿಗೆ ಬಂದಾಗ ಬೇಕಾದಾಗ ಗುಸ್ಲ ಮಾಡಲು ಅಡ್ಡಿಯಿಲ್ಲ. ಆದರೆ ಮೇಲಿನಂಥ ಪ್ರಸಂಗಳಲ್ಲಿ ಮಾಡಲೇಬೇಕು; ತಪ್ಪಿಸಲೇಬಾರದು. ಮೇಲೆ ಹೇಳಿದ ಮೊದಲಿನ ನಾಲ್ಕು ಪ್ರಸಂಗಗಳಲ್ಲಿ (ಅಂದರೆ, ಶರೀರವು ಅಪವಿತ್ರವಾದಾಗ) ಗುಸ್ಲ ಮಾಡದಿರುವದು ಪಾಪವಾಗುತ್ತದೆ.

ಶಿಷ್ಯ:—ಗುಸ್ಲ ಮಾಡದಲೆ ಹಾಗೆಯೇ ಸ್ನಾನವನ್ನು ಮಾಡಿದರೆ ಮೈಲಿಗೆಯಾದ ಶರೀರವು ಪವಿತ್ರವಾಗುವದಿಲ್ಲೇನು?

ಗುರು:—ಬರೇ ಸ್ನಾನವನ್ನು ಮಾಡಿದರೆ ಶರೀರವು ಸ್ವಚ್ಛವಾಗಬಹುದು; ಆದರೆ, ಪವಿತ್ರವಾಗಲಾರದು. ಮೈಲಿಗೆಗಳಿಂದ ಅಪವಿತ್ರವಾದ ಶರೀರವನ್ನು ಪವಿತ್ರಗೊಳಿಸಬೇಕಾದರೆ, ಗುಸ್ಲ ಮಾಡಲೇಬೇಕು.

ಶಿಷ್ಯ:—ಶರೀರವು ಮೈಲಿಗೆಯಾದಾಗ ಏನೇನು ಮಾಡಬಾರದು?

ಗುರು:—ಶರೀರವು ಮೈಲಿಗೆಯಾದಾಗ—

[೧] ನಮಾಜ ರೋಜಾ ಮೊದಲಾದ ಧಾರ್ಮಿಕ ವಿಧಿಗಳನ್ನು ಮಾಡಬಾರದು.

[೨] ಕುರಾನವನ್ನು ಮುಟ್ಟಬಾರದು ಮತ್ತು ಕುರಾನದ ಶ್ಲೋಕಗಳನ್ನು ಪಠಿಸಬಾರದು; ಆದರೆ ಮೌನದಿಂದ ಬಾಯಲ್ಲಿಯೇ ಪಠಿಸಿದರೆ ಅಡ್ಡಿಯಿಲ್ಲ.

[೩] ಪರಮಾತ್ಮನ ಮತ್ತು ಪ್ರವಾದಿಗಳ ನಾಮ-ಸ್ಮರಣೆಯನ್ನು ಮಾಡಬಾರದು, ಆದರೆ ಮೌನದಿಂದ ಬಾಯಲ್ಲಿಯೇ ಮಾಡಿದರೆ ಅಡ್ಡಿಯಿಲ್ಲ.

[೪] ಮಶೀದೆಯ ಒಳಗೆ ಹೋಗಬಾರದು; ಮತ್ತು ಸತ್ಪುರುಷರ ಸಮಾಧಿಯ ಬಳಿಗೆ ಹೋಗಬಾರದು.

[೫] ಗುಸ್ಲ ಮಾಡಿಸಲ್ಪಟ್ಟ ಹೆಣವನ್ನು ಅಥವಾ ಹೆಣದ ಡೋಲಿಯನ್ನು ಮುಟ್ಟಬಾರದು.

## --ಅಜಾನ್--

ಶಿಷ್ಯ:—"ಅಜಾನ್" ಅಂದರೆ ಏನು ? ಅದನ್ನು ವಿವರಿಸಿ ಹೇಳುವಿರಾ?

ಗುರು:—"ಅಜಾನ್" ಅಂದರೆ, ಪ್ರಾರ್ಥನೆಯ ಕೂಗು. ಸಾಮೂಹಿಕ ಪ್ರಾರ್ಥನೆಯ [ನಮಾಜ್-ಜಮಾಅತದ] ವೇಳೆಯು ಸಮೀಪಿಸುತ್ತಲೇ, ನಮಾಜಕ್ಕಿಂತ ತುಸು ಮುಂಚಿತವಾಗಿ, ಒಬ್ಬನು ಮಶೀದೆಯ ಮುಂಭಾಗದಲ್ಲಿರುವ ಎತ್ತರವಾದ ಸ್ಥಳದಲ್ಲಿ ಕಾಬಾದ ದಿಕ್ಕಿನೆಡೆ ಮುಖವನ್ನು ಮಾಡಿ ಎದ್ದು ನಿಂತು, ಮಶೀದೆಯ ಹೊರಗಿನವರಿಗೆ ಸಹ ಕೇಳಿಸುವಂತೆ ಎತ್ತರವಾದ ಧ್ವನಿಯಿಂದ, "ಅಜಾನ"ದ ಶಬ್ದಗಳನ್ನು ಸಾವಧಾನದಿಂದ ಉಚ್ಚರಿಸುವನು. ಅಜಾನದ ಮಜಕೂರು (ವಿಷಯವು ಹೀಗಿರುತ್ತದೆ:-)

"ಅಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್,
ಅಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್, ||೧||
ಅಷ್ಹದು ಅಲ್ ಲಾ ಇಲಾಹಾ ಇಲ್ಲಲ್ಲಾಹ್
ಅಷ್ಹದು ಅಲ್ ಲಾ ಇಲಾಹಾ ಇಲ್ಲಲ್ಲಾಹ್ ||೨||
ಅಷ್ಹದು ಅನ್ನ ಮುಹಮ್ಮದು ರ್ರಸೂಲುಲ್ಲಾಹ್
ಅಷ್ಹದು ಅನ್ನ ಮುಹಮ್ಮದು ರ್ರಸೂಲುಲ್ಲಾಹ್ ||೩||
ಹಯ್ಯಾಲಸ್ಸಲಾತ್, ಹಯ್ಯಾಲಸ್ಸಲಾತ್ ||೪||
ಹಯ್ಯಾಲಲ್‌ಫಲಾಹ್, ಹಯ್ಯಾಲಲ್‌ಫಲಾಹ್ ||೫||
ಅಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್, ||೬||
ಲಾ ಇಲಾಹಾ ಇಲ್ಲಲ್ಲಾಹ್ ||೭||

ಅನು:- ದೇವನಿರುವನು ದೊಡ್ಡವನು, ದೇವ ದೊಡ್ಡವನು ||
ಅಹುದಹುದು ದೇವ ದೊಡ್ಡವನು, ದೇವ ದೊಡ್ಡವನು ||೧||
ದೇವನಂ ಬಿಟ್ಟು ಮತ್ತಾವನಿಲ್ಲ ಪೂಜಿತನು |
ನನ್ನ ಮನವನು ಸಾಕ್ಷಿಸುತ ನಾಪೇಳುವೆನು |
ದೇವನನು ಬಿಟ್ಟು ಮತ್ತಾವನಿಲ್ಲ ಪೂಜಿತನು |
ನನ್ನ ಮನವನು ಸಾಕ್ಷಿಸುತ ನಾ ಪೇಳುವೆನು ||೨||
ಮಹಮ್ಮದರು ದೇವಪ್ರವಾದಿಗಳಹುದು ನಿಶ್ಚಯದಿಂ |
ಎಂಬುದನು ನಾ ಪೇಳುವೆನು ನನ್ನ ಮನಸಾಕ್ಷಿಯಿಂ |
ಮಹಮ್ಮದರು ದೇವ ಪ್ರವಾದಿಗಳಹುದು ನಿಶ್ಚಯದಿಂ |
ಎಂಬುದನು ನಾ ಪೇಳುವೆನು ನನ್ನ ಮನಸಾಕ್ಷಿಯಿಂ ||೩||

ಬನ್ನಿರಿ ಬನ್ನಿರಿ ಮಾಡಲು ಈಶ ಪ್ರಾರ್ಥನೆಯನ್ನು|
ಬನ್ನಿರೈ ಬನ್ನಿರೈ ನೀವು ಪ್ರಾರ್ಥಿಸಲು ದೇವನನು ||೪||
ಬನ್ನಿರಿ ಬನ್ನಿರಿ ನೀವೆಲ್ಲ ಮಾಡಲು ಸತ್ಕರ್ಮವನು |
ಬನ್ನಿರೈ ಬನ್ನಿರೈ ಮಾಡಲು ಮಂಗಳ ಕಾರ್ಯವನು ||೫||
ದೇವನಹುದು ದೊಡ್ಡವನು, ಅವನಹುದು ದೊಡ್ಡವನು ||೬||
ಆರಿಲ್ಲ ಆರಿಲ್ಲ; ದೇವನಂಬಿಟ್ಟು ಮಾತ್ತಾವನಿಲ್ಲ ಪೂಜಿತನು ||೭||

:— ಪ್ರತಿ ನಮಾಜದ ವೇಳೆಗೂ ಹೀಗೆಯೇ "ಅಜಾನ್" ಅನ್ನಬೇಕೇ ?

ಗುರು:— ಅಹುದು. ಪ್ರತಿ ಸಾಮೂಹಿಕ ನಮಾಜದ ವೇಳೆಗೆ ಹೀಗೆಯೇ ಅಜಾನ್ ಅನ್ನಬೇಕು; ಆದರೆ ಫಜ್ರ-ನಮಾಜದ(ಪ್ರಾತಃಕಾಲ-ಪ್ರಾರ್ಥನೆಯು) "ಅಜಾನ್" ಅನ್ನುವಾಗ ಮಾತ್ರ, "ಹಯ್ಯಾ ಲಲ್ ಫಲಾಹ್" ದ ನಂತರ, "ಅಸ್ಸಲಾತು ಖೈರುಮ್ಮಿನ್ನೌಮ್" ಅಂತಾ ಎರಡಾವರ್ತಿ ಅಂದು ಮುಂದಿನದನ್ನು ಪೂರ್ಣಿಸಬೇಕು.

ಶಿಷ್ಯ:— "ಅಸ್ಸಲಾತು ಖೈರುಮ್ಮಿನ್ನೌಮ್" ಅಂದರೆ ಏನು ?

ಗುರು:— "ನಿದ್ರೆಗಿಂತ ಪ್ರಾರ್ಥನೆಯು ಶ್ರೇಷ್ಠವಾದದ್ದು" ಅಂತಾ ಅದರ ಅರ್ಥವಾಗುತ್ತದೆ.

ಶಿಷ್ಯ:— "ಅಜಾನ್" ಅನ್ನುವವನಿಗೆ ಏನೆನ್ನುತ್ತಾರೆ ?

ಗುರು:— ಅವನಿಗೆ ಮುಅಝ್ಝಿನ್ ಅನ್ನುತ್ತಾರೆ.

ಶಿಷ್ಯ:— ಅಜಾನ್ ಅನ್ನುವ ಪದ್ಧತಿಯನ್ನು ಸವಿಸ್ತಾರವಾಗಿ ವಿವರಿಸುವಿರಾ ?

ಗುರು:— ಅಜಾನ್ ಅನ್ನುವವನು (ಮುಅಝ್ಝಿನ್‌ನು) ನಮಾಜದ ವೇಳೆಯು ಸಮೀಪಿಸುತ್ತಲೇ ವಜೂ ಮಾಡಿಕೊಂಡು, ಮಸೀದೆಯ ಮುಂಭಾಗದಲ್ಲಿರುವ ಎತ್ತರವಾದ ಸ್ಥಳದಲ್ಲಿ ಕಾಬಾದ ದಿಕ್ಕಿನೆಡೆ ಮುಖ ಮಾಡಿ ಎದ್ದುನಿಂತು, ತೋರ್ ಬೆರಳುಗಳ ತುದಿಗಳನ್ನು ಆ ಆ ಕಿವಿಗಳ ರಂಧ್ರಗಳಿಗೆ ಸಾವಕಾಶವಾಗಿ ಆನಿಸಿ, ಎತ್ತರವಾದ ಧ್ವನಿಯಿದ ಅಜಾನ್‌ದ ಶಬ್ದಗಳನ್ನು ಸಾವಧಾನವಾಗಿ ಉಚ್ಚರಿಸಬೇಕು. "ಅಜಾನ್"ದ ಪ್ರಾರಂಭದಿಂದ ಅಂತ್ಯದ ವರೆಗೆ

ಕಾಬಾ ದಿಕ್ಕಿನೆಡೆಯೇ ಮುಖವನ್ನು ಮಾಡಿರಬೇಕು; ಆದರೆ, "ಹಯ್ಯಾಲ ಸ್ಸಲಾತ್" ಅಂತಾ ಅನ್ನುವಾಗ ಬಲಗಡೆಗೆ, ಮತ್ತು "ಹಯ್ಯಾಲಲ್ಫ ಲಾಹ್" ಅಂತಾ ಅನ್ನುವಾಗ ಎಡಗಡೆಗೆ, ಮುಖವನ್ನು ಹೊರಳಿಸಬೇಕು.

ಶಿಷ್ಯ:— ಮುಅಝ್ಝಿನ್‌ನು ಅಜಾನ್ ಹೇಳುತ್ತಿರುವಾಗ, ಮಸೀದೆ ಯಲ್ಲಿದ್ದವರು ಅಥವಾ ಮಸೀದೆಯ ಅಕ್ಕಪಕ್ಕದಲ್ಲಿದ್ದವರು ಏನು ಮಾಡುತ್ತಿರಬೇಕು?

ಗುರು:— ಮಾತು ಕತೆಗಳನ್ನಾಡದಲೆ ನಮ್ರದಿಂದ ಕುಳಿತುಕೊಂಡಿರ ಬೇಕು; ಅಥವಾ ನಿಂತಲ್ಲಿಯೇ ನಿಂತು ಅಜಾನ್‌ದ ಶಬ್ದಗಳನ್ನು ಆಲಿಸಿ ಕೇಳುತ್ತಿರಬೇಕು. ಅಜಾನ್ ಮುಗಿದ ನಂತರ, ಎರಡೂ ಹಸ್ತಗಳನ್ನು ಭುಜಗಳ ವರೆಗೆ ಮೇಲಕ್ಕೆತ್ತಿ ಮುಖಕ್ಕೆ ಎದುರಾಗಿ ಹಿಡಿದು, ಈ ಕೆಳಗಿನ "ದುಆ" ಪಠಿಸಿ ಮುಖದ ಮೇಲೆ ಹಸ್ತಗಳನ್ನಾಡಿಸಿಕೊಳ್ಳಬೇಕು,:—

## —: ದುಆ :—

"ಅಲ್ಲಾಹುಮ್ಮ ರಬ್ಬ, ಹಾಜಿಹಿದ್-ದಅವತಿತ್ತಾಮ್ಮತಿ,: ವಸ್ಸಲಾತಿಲ್ ಆತಿ ಮುಹಮ್ಮದನ್ನಿಲ್ ವಸೀಲತ ವಲ್ ಫಜೀಲತ, ವ ಬಅಸ್‌ಹು ಮುಕಾಮಮ್ ಮ್ಮಹಮೂದಾ ನಿಲ್ಲಜೀ ವಅದ್‌ಹು; ಇನ್ನಕ ಲಾ ತುಖ್ಲಿಫುಲ್— ಮೀಆದ."

ಅನು॥ ಹೇ ಪರಮಾತ್ಮಾ, ಹೇ ಪ್ರಭುವೇ, ಈ ಪ್ರಾರ್ಥನಾ ಕೂಗವನ್ನೂ ಮತ್ತು ನೇಮಿತವಾಗಿ ನಡೆದಿರುವ ಈ ಪ್ರಾರ್ಥನೆಯನ್ನೂ, ಹ॥ ಮುಹಮ್ಮದ ಪೈಗಂಬರರಿಗಾಗಿ, ಸಹಾಯದ ಮತ್ತು ಅಭ್ಯುದಯದ ಸೋಪಾನವನ್ನಾಗಿ ಮಾಡು! ಮತ್ತು ಯಾವ ಅತ್ಯುತ್ತಮವಾದ ತರಗತಿಯನ್ನು ಹ॥ ಮುಹಮ್ಮದ ಪೈಗಂಬರರಿಗೆ ನೀನು ವಾಗ್ದಾನ ಮಾಡಿರುವಿಯೋ, ಆ ತರಗತಿಯನ್ನು ಅವರಿಗೆ ದಯಪಾಲಿಸು! ನಿಶ್ಚಯವಾಗಿಯೂ, ವಾಗ್ದಾನವನ್ನು ಮೀರುವವನು ನೀನಲ್ಲ!

## —: ಅಕಾಮತ :—

ಶಿಷ್ಯ:— ನಮಾಜ ಮಾಡುವದಕ್ಕಾಗಿ ಇಮಾಮನ ಹಿಂದೆ ಎಲ್ಲರೂ ಸಾಲಾಗಿ ನಿಂತಾಗ, ನಮಾಜ ಪ್ರಾರಂಭವಾಗುವದಕ್ಕಿಂತ ಮೊದಲು, ಇಮಾಮನ ಹಿಂದೆ ನಿಂತವನು ಏನೋ ಅನ್ನುತ್ತಾನಲ್ಲವೇ? ಅದಕ್ಕೆ ಏನೆನ್ನುತ್ತಾರೆ?

ಗುರು:— ಅದಕ್ಕೆ "ಅಕಾಮತ್" ಎನ್ನುತ್ತಾರೆ. "ಅಜಾನ್"ದ ವಾಕ್ಯ ಗಳನ್ನೇ ಅಕಾಮತ್‌ದಲ್ಲಿ ಪಠಿಸುತ್ತಾರೆ; ಆದರೆ, "ಹಯ್ಯಾಲಲ್‌ಫಲಾಹ್" ದ ನಂತರ "ಕದ್ ಕಾಮತಿಸ್ಸೊಲಾತ್" ಅಂತಾ ಎರಡಾವರ್ತಿ ಅಂದು, ಮುಂದಿನದನ್ನು ಪೂರ್ಣಿಸಬೇಕಾಗುತ್ತದೆ.

ಶಿಷ್ಯ:— ಅಕಾಮತ್ ಹೇಳುವ ಪದ್ಧತಿಯು ಹೇಗಿರುತ್ತದೆ ?

ಗುರು:— ಅಕಾಮತ್ ಹೇಳುವ ಪದ್ಧತಿಯು ಅಜಾನ್ ಹೇಳುವ ಪದ್ಧತಿಯಂತೆಯೇ ಇರುತ್ತದೆ; ಆದರೆ, ಅಕಾಮತದ ಶಬ್ದಗಳನ್ನು ಹಗುರಾದ ಧ್ವನಿಯಿಂದ ತೀವ್ರವಾಗಿ ಪಠಿಸಬೇಕು.

ಶಿಷ್ಯ:— ಮುಕ್ತದಿ ಜನರಲ್ಲಿಯ (ಹಿಂಬಾಲಕರಲ್ಲಿಯ) ಯಾವನಾದ ರೊಬ್ಬನು ಅಕಾಮತ್ ಹೇಳಬಲ್ಲನೋ ?

ಗುರು:—ಇಲ್ಲ. ಇಮಾಮನ ಹಿಂದೆ ಸ್ವಲ್ಪ ಬಲಗಡೆ ನಿಂತವನೇ ಅಕಾ ಮತ್ ಹೇಳತಕ್ಕದ್ದು. "ಮೊಅಝ್ಝಿನ್"ನು ನಮಾಜದ ಕಾಲಕ್ಕೆ ಹಾಜರ್ ಇದ್ದರೆ, ಅವನೇ ಅಂಥ ಸ್ಥಳದಲ್ಲಿ ನಿಂತು ಅಕಾಮತ್ ಹೇಳಬೇಕು.

## —:ನಮಾಜ ಮಾಡುವ ಪದ್ಧತಿ:—

ಶಿಷ್ಯ:— ನಮಾಜ ಮಾಡುವ ಪದ್ಧತಿಯನ್ನು ಸವಿಸ್ತಾರವಾಗಿ ವಿವ ರಿಸಿ ಹೇಳುವಿರಾ ?

ಗುರು:— ಮೊದಲು ವಜೂ ಮಾಡಿಕೊಂಡು ಸ್ವಚ್ಛವಾದ ಸ್ಥಳದಲ್ಲಿ ಕಾಬಾದ ದಿಕ್ಕಿನೆಡೆ ಮುಖವನ್ನು ಮಾಡಿ ಎದ್ದು ನಿಲ್ಲಬೇಕು; ನಂತರ "ಇನ್ನೀ ವಜ್‌ಹತು ವಜ್‌ಹಿಯ...." ಇದನ್ನು ಪಠಿಸಿ, ನಮಾಜದ ನಿಯ್ಯತ ಮಾಡ ಬೇಕು. ನಿಯ್ಯತ್ ಮಾಡಿದ ನಂತರ, "ಅಲ್ಲಾಹು ಅಕಬರ್" ಅನ್ನುತ್ತ ಎರಡೂ ಕೈಗಳನ್ನು ಕಿವಿಗಳವರೆಗೆ ಮೇಲಕ್ಕೆತ್ತಿ, ತೀವ್ರವೇ ಕೈಗಳನ್ನು ಏಕ ಕಾಲಕ್ಕೆ ಕೆಳಗೊಯ್ದು ಹೊಂಕಳಭಾಗದ ಕೆಳಗೆ ಒಂದರ ಮೇಲೆ ಒಂದರಂತೆ ಕೂಡಿಸಿ ಇಡಬೇಕು. ಎರಡೂ ಮುಂಗೈ ಗಂಡುಗಳು ಒಂದರ ಮೇಲೆ ಒಂದರಂತೆ ಇರಬೇಕು. (ಹೇಗೆಂದರೆ, ಕೆಳಗೆ ಎಡಗೈ ಮತ್ತು ಮೇಲೆ ಬಲಗೈ ಇರಬೇಕು; ಬಲಗೈ ಬೆರಳುಗಳಿಂದ ಎಡಗೈಯನ್ನು ಹಿಡಿದುಕೊಳ್ಳಬೇಕು.)

ಕೈಗಳನ್ನು ಜೋಡಿಸಿದ ನಂತರ, "ಸನಾ", "ತಉಜ", "ತಸ್ಮಿಯಾ" ಗಳನ್ನು ಅನುಕ್ರಮವಾಗಿ ಪಠಿಸಿ, "ಸೂರೆ ಫಾತಿಹಾ" ಮತ್ತು ಕುರಾನದಲ್ಲಿಯ ಯಾವದಾದರೊಂದು ಸೂರಾ (ಅಧ್ಯಾಯ)ಪಠಿಸಬೇಕು.

ಆ ನಂತರ, ಕೈಗಳನ್ನು ಬಿಚ್ಚಿ, "ಅಲ್ಲಾಹು-ಅಕ್ಬರ್" ಅನ್ನುತ್ತ ರುಕೂದಲ್ಲಿ ಹೋಗಬೇಕು. ಅಂದರೆ, ಅರ್ಧಾಕಾರವಾಗಿ ಬಾಗಬೇಕು (ಬಾಗಿದಾಗ ಮೊಣಕಾಲುಗಳನ್ನು ಕೈಗಳಿಂದ ಹಿಡಿಯಬೇಕು. ಮತ್ತು ಮೊಣಕಾಲುಗಳನ್ನು ಮಣಿಸಬಾರದು.)ರುಕೂದಲ್ಲಿ ಇದ್ದಾಗ, ಅಂದರೆ, ಬಾಗಿದ ಅವಸ್ಥೆಯಲ್ಲಿದ್ದಾಗ, "ಸುಬ್ಹಾನ ರಬ್ಬಿಯಲ್ ಅಝೀಮ್" ಅಂತಾ ಮೂರು ಅಥವಾ ಐದು ಸಾರೆ ಪಠಿಸಿ, "ಸಮಿ ಅಲ್ಲಾಹು ಲಿಮನ್ ಹಮೀದ್" ಅಂತಾ ಪಠಿಸುತ್ತ ನೀಟಾಗಿ ಎದ್ದು ನಿಲ್ಲಬೇಕು; ಮತ್ತು ನಿಲ್ಲುತ್ತಲೇ "ರಬ್ಬನಾ ಲಕಲ್ ಹಮ್ದ" ಅಂತಾ ಪಠಿಸಬೇಕು.

ಆ ನಂತರ, "ಅಲ್ಲಾಹು ಅಕ್ಬರ್" ಅಂತಾ ಅನ್ನುತ್ತ "ಸಿಜ್ದಾ" ಮಾಡಬೇಕು. ಅಂದರೆ, ಸಾಸ್ಟಾಂಗವೆರಗಬೇಕು. ( ಸಾಸ್ಟಾಂಗದಲ್ಲಿದ್ದಾಗ ಎರಡೂ ಕಾಲಿನ ಹೆಬ್ಬೆರಳುಗಳ ತುದಿಗಳು, ಎರಡೂ ಮೊಣಕಾಲು ಎರಡೂ ಹಸ್ತಗಳು, ಮೂಗಿನ ತುದಿ ಮತ್ತು ಹಣೆ, ಈ ಅಷ್ಟಾಂಗಗಳು ನೆಲಕ್ಕೆ ಹತ್ತಿರಬೇಕು. ಸಾಸಷ್ಟಾಂಗವೆರಗುವಾಗ ಮೊದಲು ಮೊಣಕಾಲುಗಳನ್ನು ನೆಲಕ್ಕೆಊರಿ ಅಂಗೈಗಳನ್ನು ನೆಲಕ್ಕೆ ಹಚ್ಚಿ ಮೂಗಿನ್ನ ತುದಿಯನ್ನು ನೆಲಕ್ಕೆ ಆನಿಸಿ, ನಂತರ ಹಣೆಯನ್ನು ನೆಲಕ್ಕೆ ಹಚ್ಚಬೇಕು. )ಸಿಜ್ದಾದಲ್ಲಿ ಇದ್ದಾಗ, ಅಂದರೆ, ಸಾಸ್ಟಾಂಗದ ಅವಸ್ಥೆಯಲ್ಲಿದ್ದಾಗ, "ಸುಬ್ಹಾನ ರಬ್ಬಿಯಲ್ ಅಲಾ" ಅಂತಾ ಮೂರು ಅಥವಾ ಐದು ಸಾರೆ ಪಠಿಸಿ, "ಅಲ್ಲಾಹು ಅಕಬರ್" ಅನ್ನುತ್ತ ಕುಳಿತುಕೊಳ್ಳಬೇಕು; ಮತ್ತೊಮ್ಮೆ ತೀವ್ರವೇ "ಅಲ್ಲಾಹು ಅಕಬರ್", ಅನ್ನುತ್ತ ಸಾಸ್ಟಾಂಗವೆರಗಿ, "ಸುಬ್ಹಾನ ರಬ್ಬಿಯಲ್ಆಲಾ" ಅಂತಾ ಮೂರು ಅಥವಾ ಐದು ಸಾರೆ ಪಠಿಸಿ, "ಅಲಾಹು-ಅಕಬರ್" ಅನ್ನುತ್ತ ನೀಟಾಗಿ ಎದ್ದು ನಿಂತು, ಮೊದಲಿನಂತೆ ಹೊಂಕಳ ಭಾಗದ ಕೆಳಗೆ ಕೈಗಳನ್ನು ಜೋಡಿಸಿಕೊಳ್ಳಬೇಕು. ಇಲ್ಲಿಗೆ **ಒಂದು ರಕಾತು ಮುಗಿದಂತಾಯಿತು.**

ಎರಡನೇ ರಕಾತವನ್ನು ಪ್ರಾರಂಭಿಸುವದಕ್ಕಾಗಿ, "ತಸ್ಮಿಯಾ" ಸೂರೆ ಫಾತಿಹಾ ಮತ್ತು ಯಾವುದಾದರೊಂದು ಸೂರಾ ಇವುಗಳನ್ನು ಅನುಕ್ರಮವಾಗಿ ಪಠಿಸಿ, ಮೊದಲಿನದರಂತೆ ಎರಡನೇ ರಕಾತವನ್ನು ಪೂರ್ಣಿಸಿ, ಕುಳಿತುಕೊಳ್ಳಬೇಕು.

ಕಾಯ್ದಾದಲ್ಲಿದ್ದಾಗ, ಅಂದರೆ ಕುಳಿತುಕೊಂಡಿರುವ ಅವಸ್ಥೆಯಲ್ಲಿ ಇದ್ದಾಗ, "ಅತ್ತಹಿಯ್ಯಾತ್,, "ದರೂದೆ-ಇಬ್ರಾಹೀಮ್" ದುಆಯೆ-ಮಾಸೂರಾ" ಇವುಗಳನ್ನು ಅನುಕ್ರಮವಾಗಿ ಪಠಿಸಬೇಕು. ಆ ನಂತರ "ಅಸ್ಸಲಾಮು ಅಲೈಕುಮ್ ರ್ಹಮತುಲ್ಲಾಹ್" ಅಂತಾ ಅನ್ನುತ್ತ ಮೊದಲು ಬಲಗಡೆಗೆ ಮುಖವನ್ನು ಹೊರಳಿಸಬೇಕು. ನಂತರ ಮತ್ತೆ"ಅಸ್ಸಲಾಮು ಅಲೈಕುಮ್ ರ್ಹಮತುಲ್ಲಾಹ್" ಅಂತಾ ಅನ್ನುತ್ತ ಎಡಗಡೆಗೆ ಮುಖವನ್ನು ಹೊರಳಿಸಬೇಕು. **ಇಲ್ಲಿಗೆ ಎರಡು ರಕಾತುಗಳ ನಮಾಜವು ಮುಗಿದಂತಾಯಿತು.**

ಆ ನಂತರ,ಎರಡೂ ಹಸ್ತಗಳನ್ನು ಭುಜಗಳ ವರೆಗೆ ಮೇಲಕ್ಕೆತ್ತಿ ಮುಖದ ಎದುರಾಗಿ ಹಿಡಿದು, "ದುಆಯೆ-ಬಾದಜ್-ನಮಾಜ" ವನ್ನು ಪಠಿಸಬೇಕು. ಮತ್ತು ದುಆ ಪಠಣೆಯು ಮುಗಿದ ನಂತರ ಮುಖದ ಮೇಲೆ ಹಸ್ತಗಳನ್ನಾಡಿಸಿಕೊಳ್ಳಬೇಕು. ಇಲ್ಲಿಗೆ **ಎರಡು ರಕಾತುಗಳ ನಮಾಜವು ಸಂಪೂರ್ಣವಾದಂತಾಯಿತು.**

ಶ್ರ:— ಎರಡು ರಕಾತಗಳ ನಮಾಜ ಮಾಡುವ ಪದ್ಧತಿಯು ಗೊತ್ತಾಯಿತು. ಆದರೆ, ಮೂರು ಅಥವಾ ನಾಲ್ಕು ರಕಾತಗಳ ನಮಾಜ ಹೇಗೆ ಆಚರಿಸಬೇಕು ?

ಗುರು:— ಎರಡು ರಕಾತಗಳು ಮುಗಿದ ನಂತರ ಕಾಯ್ದಾದಲ್ಲಿ ಕುಳಿತಾಗ ಬರೇ "ಅತ್ತಹಿಯ್ಯಾತ್" ವನ್ನು ಪಠಿಸಿ ಮೇಲಕ್ಕೆ ಎದ್ದು ನಿಲ್ಲಬೇಕು; ಮತ್ತು ವಾಡಿಕೆಯಂತೆ ಮೂರನೇ ಅಥವಾ ನಾಲ್ಕನೇ ರಕಾತವನ್ನು ಮುಗಿಸಿ, ಮತ್ತೆ ಕಾಯ್ದಾದಲ್ಲಿ ಕುಳಿತು"ಅತ್ತಹಿಯ್ಯಾತ್" "ದರೂದೆ-ಇಬ್ರಾಹೀಮ್"

"ಮಿಆಯೆ-ಮಾಸೂರಾ,, ಇವುಗಳನ್ನು ಅನುಕ್ರಮವಾಗಿ ಪಠಿಸಿದ ನಂತರ ಸಲಾಮ್ ಹೊರಳಬೇಕು.

ಶಿಷ್ಯ:— "ಕಾಯ್ದಾ"ದಲ್ಲಿ ಕುಳಿತಾಗ ಯಾವ ರೀತಿಯಾಗಿ ಕುಳಿತುಕೊಳ್ಳಬೇಕು. ?

ಗುರು:— ಎರಡೂ ಮೊಣಕಾಲುಗಳು ನೆಲಕ್ಕೆ ಹತ್ತಿರಬೇಕು; ಬಲಗಾಲ ಹೆಬ್ಬೆರಳಿನ ಮುಂಭಾಗದ ಕೆಳಭಾಗವನ್ನು ನೆಲಕ್ಕೆ ಊರಿ, ಅದರ ಮೇಲೆ ಪಾದವನ್ನು ಮಡಿಚಿ ಹಿಂಬಡವನ್ನು ಮೇಲಕ್ಕೆಬ್ಬಿಸಬೇಕು; ಎಡ ಪಾದದ ಎಡಮುಗ್ಗಲವನ್ನು ದಕ್ಷಿಣೋತ್ತರವಾಗಿ ನೆಲದ ಮೇಲೆ ಹಾಸಿ, ಅದರ ಮೇಲೆ ಕೂಡ್ರಬೇಕು: ಅಂಗೈಗಳನ್ನು ಮೊಣಕಾಲುಗಳ ಮೇಲೆ ಇಟ್ಟುಕೊಳ್ಳಬೇಕು; ನಡವು ಬಾಗಿರಬಾರದು; ಮುಖವನ್ನು ಸ್ವಲ್ಪು ಕೆಳಗೆ ಮಾಡಿ, ಎರಡೂ ಮೊಣಕಾಲುಗಳ ಮಧ್ಯದ ನೆಲದ ಮೇಲೆ ದೃಷ್ಟಿಗಳನ್ನು ಕೇಂದ್ರಿಸಬೇಕು.

ಶಿಷ್ಯ:— ಯಾವ ಯಾವ ರಕಾತಗಳು ಸಾಮೂಹಿಕವಾಗಿ ಆಚರಿಸಲ್ಪಡುತ್ತವೆ ?

ಗುರು:— ಕೆಳಗಿನ ರಕಾತಗಳನ್ನು ಸಾಮೂಹಿಕವಾಗಿ ಆಚರಿಸಲು ಬರುತ್ತದೆ:--

(೧) ಎಲ್ಲ ಫರ್ಜ ರಕಾತಗಳನ್ನು, ಅಂದರೆ, ಫಜ್ರ, ಝೋಹರ್, ಅಸ್ರ, ಮಗ್ರೀಬ್, ಇಷಾ ಮತ್ತು ಜುಮ್ಮಾ ನಮಾಜುಗಳ ಫರ್ಜ-ರಕಾತಗಳನ್ನು

(೨) ನಮಾಜೆ-ತರಾವೀಹ್, ಇದರ ಸುನ್ನತ್ ರಕಾತಗಳನ್ನು

(೩) ನಮಾಜೆ-ವಿತ್ರ, ನಮಾಜೆ-ಫಿತ್ರ ಮತ್ತು ನಮಾಜೆ-ಜುಹಾ ಈ ಮೂರು ನಮಾಜಗಳ ವಾಜಿಬ್-ರಕಾತಗಳನ್ನು

ಶಿಷ್ಯ:— ಮೇಲೆ ವಿವರಿಸಿದ ರಕಾತಗಳನ್ನು ಸಾಮೂಹಿಕವಾಗಿಯೇ ಆಚರಿಸಬೇಕೆಂಬ ನೇಮವಿರುವದೇನು ?

ಗುರು:— ಹಾಗೇನೂ ಇಲ್ಲ. ಮೇಲೆ ಹೇಳಿದ ರಕಾತಗಳನ್ನು ಸಾಮೂಹಿಕವಾಗಿ ಅಥವಾ ವೈಯುಕ್ತಿಕವಾಗಿ ಆಚರಿಸಲು ಬರುತ್ತದೆ;

ಆದರೆ, ನಮಾಜೆ-ಜುಮ್ಮಾ, ನಮಾಜೆ-ಫಿತ್ರ, ಮತ್ತು ನಮಾಜೆ-ದುಹಾ ಈ ಮೂರು ನಮಾಜುಗಳ ರಕಾತಗಳನ್ನು ಮಾತ್ರ, ಸಾಮೂಹಿಕವಾಗಿಯೇ ಆಚರಿಸಬೇಕೆಂಬ ನೇಮವಿದೆ.

ಶಿಷ್ಯ:— ಸಾಮೂಹಿಕ ನಮಾಜ ಮಾಡುವಾಗ, ಇಮಾಮನ ಮತ್ತು ಹಿಂಬಾಲಕನ ಕ್ರಿಯೆ ಮತ್ತು ಪಠಣೆಗಳಲ್ಲಿ ವ್ಯತ್ಯಾಸಗಳು ಇರುತ್ತವೆ ಏನು ?

ಗುರು.— ಇಮಾಮನ ಮತ್ತು ಹಿಂಬಾಲಕನ ಕ್ರಿಯೆಗಳಲ್ಲಿ ಯಾವ ವ್ಯತ್ಯಾಸಗಳೂ ಇರುವದಿಲ್ಲ; ಆದರೆ ಪಠಣೆಗಳಲ್ಲಿ ಮಾತ್ರ ವ್ಯತ್ಯಾಸಗಳಿರುತ್ತವೆ. ಕೆಳಗೆ ತೋರಿಸಿದ ಪತ್ರಿಕೆಯನ್ನು (ಚಾರ್ಟವನ್ನು) ಅವಲೋಕಿಸಿರೆ, ಆ ವ್ಯತ್ಯಾಸಗಳಾವವು ಎಂಬದು ಸ್ಪಷ್ಟವಾಗುವದು:—

## —ಪತ್ರಿಕೆ—

| ನಜಮಾದಲ್ಲಿಯ ಪಠಣೆಗಳು | ಇಮಾಮನು | ಹಿಂಬಾಲಕನು |
|---|---|---|
| ೧) ನಿಯತ್ ಮಾಡುವಾಗ, (ಇಕ್ತದೈತು ಬಿ ಹಾಜಲ್ ಇಮಾಮ್) ಅಂತಾ | ಅನ್ನಬಾರದು | ಅನ್ನಬೇಕು. |
| ೨) ನಿಯತ್ ಮಾಡಿದ ನಂತರ ಎರಡೂ ಕೈಗಳನ್ನು ಕಿವಿಗಳ ವರೆಗೆ ಮೇಲಕ್ಕೆತ್ತಿ "ಅಲ್ಲಾಹು ಅಕ್ಬರ್" ಅಂತಾ.... | ಎಲ್ಲರಿಗೂ ಕೇಳಿಸುವಂತೆ ಅನ್ನಬೇಕು. | ಬಾಯಲ್ಲಿಯೇ ಪಠಿಸಬೇಕು. |
| ೩) ಸೂರೆ ಫಾತಿಹಾ ಮತ್ತು ಕರಾನದಲ್ಲಿಯ ಸೂರಾ | ಪಠಿಸಬೇಕು | ಪಠಿಸಬಾರದು |
| ೪) ರುಕುದಲ್ಲಿ ಹೋಗುವಾಗ "ಅಲ್ಲಾಹು-ಅಕ್ಬರ್" ಅಂತಾ.... .... | ಎಲ್ಲರಿಗೂ ಕೇಳಿಸುವಂತೆ ಅನ್ನಬೇಕು | ಬಾಯಲ್ಲಿಯೇ ಪಠಿಸಬೇಕು. |

| | | |
|---|---|---|
| ೧) ರುಕೂದಿಂದ ಏಳುವಾಗ. | 'ಸಮೀ ಅಲ್ಲಾಹು ಲಿ ಮ ನ್ ಹ ಮೀ ದ್' ಅಂತಾ ಎಲ್ಲರಿಗೂ ಕೇಳಿಸುವಂತೆ ಅನ್ನಬೇಕು. | "ರಬ್ಬನಾ ಲಕಲ್ ಹಮ್ದು" ಅಂತಾ ಬಾಯಲ್ಲಿಯೇ ಅನ್ನಬೇಕು. |
| ೬) ಸಿಜ್ದಾ ಮಾಡುವಾಗ ಮತ್ತು ಸಿಜ್ದೆಯಿಂದ ಏಳುವಾಗ, "ಅಲ್ಲಾಹು ಅಕ್ಬರ್'' ಅಂತಾ .... .... | ಎಲ್ಲರಿಗೂ ಸ:ವಂತೆ ಅನ್ನಬೇಕು. | ಬಾಯಲ್ಲಿಯೇ ಪಠಿಸಬೇಕು. |
| ೭) ಸಲಾಮ್ ಹೊರಳುವಾಗ "ಅಸ್ಸಲಾಮು ಅಲೈಕುಮ್ ರ್ಹಮತುಲ್ಲಾಹ್'' ಅಂತಾ — — - | ಎಲ್ಲರಿಗೂ ಕೇಳಿಸುವಂತೆ ಅನ್ನಬೇಕು | ಬಾಯಲ್ಲಿಯೇ ಪಠಿಸಬೇಕು. |
| ೮) ನಮಾಜ ಮುಗಿದ ನಂತರ "ಮ:ಆಯೆ-ಬಾದಜ್–ನಮಾಜ"ವನ್ನು | ಎಲ್ಲರಿಗೂ ಸುವಂತೆ ಪಠಿ: ಬೇಕು. | ಪಠಿಸದಲೆ, ಇಮಾಮನ ಪಠಣೆಯನ್ನು ಕೇಳುತ್ತಿರಬೇಕು, |

ಟಿಪ್ಪಣಿ:—ಝೊಹರ್ ಮತ್ತು ಅಸ್ರ್, ಈ ಎರಡು ಸಾಮೂಹಿಕ ಪ್ರಾರ್ಥನೆಗಳಲ್ಲಿ, ಸೂರೆ-ಫಾತಿಹಾ ಮತ್ತು ಕುರಾನದ ಅಧ್ಯಾಯಗಳನ್ನು ಇಮಾಮನು ಬಾಯಲ್ಲಿಯೇ ಪಠಿಸಬೇಕು; ಆದರೆ; ಇತರ ಎಲ್ಲ ಸಾಮೂಹಿಕ ಪ್ರಾರ್ಥನೆಗಳಲ್ಲಿ ಎತ್ತರವಾದ ಧ್ವನಿಯಿಂದ, ಎಲ್ಲರಿಗೂ ಕೇಳಿಸುವಂತೆ, ಪಠಿಸಬೇಕು,

ಶಿಷ್ಯ:— ಎಲ್ಲ ನಮಾಜಗಳಲ್ಲಿಯ ಬೇರೆ ಬೇರೆ ತರದ ರಕಾತುಗಳ ಒಟ್ಟು ಸಂಖ್ಯೆಯು, ಒಂದು ದಿವಸದಲ್ಲಿ ಎಷ್ಟಾಗುತ್ತದೆ, ಒಂದು ವಾರದಲ್ಲಿ ಎಷ್ಟಾಗುತ್ತದೆ, ಮತ್ತು ಒಂದು ವರ್ಷದಲ್ಲಿ ಎಷ್ಟಾಗುತ್ತದೆ ?

ಗುರು:—ಎಲ್ಲ ತರದ ನಮಾಜಗಳಲ್ಲಿಯ ಬೇರೆ ಬೇರೆ ತರದ ರಕಾತಗಳ ಒಟ್ಟು ಸಂಖ್ಯೆಗಳು ಒಂದು ದಿವಸದಲ್ಲಿ, ಒಂದು ವಾರದಲ್ಲಿ, ಒಂದು ವರ್ಷದಲ್ಲಿ, ಎಷ್ಟೆಷ್ಟು ಆಗುತ್ತವೆ ಎಂಬುದು ಕೆಳಗಿನ ಪತ್ರಿಕೆಗಳಿಂದ ಸ್ಪಷ್ಟವಾಗುವದು:—

## ಪತ್ರಿಕೆ ನಂ. ೧

ಪ್ರತಿ ದಿವಸದ ಎಲ್ಲ ಬೇರೆ ಬೇರೆ ರಕಾತಗಳ ಒಟ್ಟು ಸಂಖ್ಯೆಯನ್ನು ತೋರಿಸುವ ಪತ್ರಿಕೆ.

| ನಮಾಜದ ಹೆಸರು | ಫರ್ಜ ರಕಾತಗಳು | ಸುನ್ನತ ರಕಾತಗಳು | ವಾಜಬ್ ರಕಾತಗಳು | ನಫೀಲ್ ರಕಾತಗಳು | ಒಟ್ಟು ರಕಾತಗಳು |
|---|---|---|---|---|---|
| ನಮಾಜೆ-ಫಜ್ರ | ೨ | ೨ | — | — | ೪ |
| ನಮಾಜೆ-ಝೊಹರ್ | ೪ | ೬ | — | ೨ | ೧೨ |
| ನಮಾಜೆ-ಅಸ್ರ | ೪ | ೪ | — | — | ೮ |
| ನಮಾಜೆ-ಮಗ್ರಿಬ್ | ೩ | ೨ | — | ೨ | ೭ |
| ನಮಾಜೆ-ಇಷಾ | ೪ | ೬ | — | ೨ | ೧೭ |
| ನಮಾಜೆ-ವಿತ್ರ | — | — | ೩ | ೨ | |
| ಒಟ್ಟು:— | ೧೭ | ೨೦ | ೩ | ೮ | ೪೮ |

ಟಿಪ್ಪಣಿ:—ಶುಕ್ರವಾರದ ಹೊರ್ತಾಗಿ ಇತರ ದಿವಸಗಳಲ್ಲಿ, ಪ್ರತಿದಿನದ ಒಟ್ಟು ರಕಾತಗಳ ಸಂಖ್ಯೆಯು ೪೮ ಆಗುತ್ತದೆ; ಶುಕ್ರವಾರ ದಿವಸದ ಸಂಖ್ಯೆಯು ೫೪ ಆಗುತ್ತದೆ.

## ಪತ್ರಿಕೆ ನಂ. ೨

ಒಂದು ವಾರದಲ್ಲಿ ಬೇರೆ ಬೇರೆ ತರದ ರಕಾತ್‌ಗಳ ಒಟ್ಟು ಸಂಖ್ಯೆಯನ್ನು ತೋರಿಸುವ ಪತ್ರಿಕೆ.

| ನಮಾಜದ ಹೆಸರು | ಫರ್ಜ ರಕಾತ | ಸೂನ್ನತ್ ರಕಾತ | ವಾಜಬ್ ರಕಾತ | ನಫೀಲ್ ರಕಾತ | ಒಟ್ಟು ರಕಾತ |
|---|---|---|---|---|---|
| ನಮಾಜೆ-ಫಜ್ರು | ೧೪ | ೧೪ | — | — | ೨೮ |
| ನಮಾಜೆ-ಝೋಹರ್ | ೨೪ | ೩೬ | — | ೧೨ | ೭೨ |
| ನಮಾಜೆ-ಅಸ್ರ | ೨೮ | ೨೮ | — | — | ೫೬ |
| ನಮಾಜೆ-ಮಗ್ರಿಬ್ | ೨೧ | ೧೪ | — | ೧೪ | ೪೯ |
| ನಮಾಜೆ-ಇಷಾ | ೨೮ | ೪೨ | — | ೧೪ | ೧೧೯ |
| ನಮಾಜೆ-ವಿತ್ರ | — | — | ೨೧ | ೧೪ | |
| ನಮಾಜೆ-ಜುಮ್ಮಾ | ೨ | ೧೦ | — | ೬ | ೧೮ |
| ಒಟ್ಟು:— | ೧೧೭ | ೧೪೪ | ೨೧ | ೬೦ | ೩೪೨ |

# ಪತ್ರಿಕೆ ನಂ. ೩

ಒಂದು ವರ್ಷದಲ್ಲಿಯ ಬೇರೆ ಬೇರೆ ತರದ ರಕಾತಗಳ ಒಟ್ಟು ಸಂಖ್ಯೆಯನ್ನು ತೋರಿಸುವ ಪತ್ರಿಕೆ:—

[೧) ಇಸ್ಲಾಮೀ ಕ್ಯಾಲೆಂಡರದ ಪ್ರಕಾರ ಒಂದು ವರ್ಷದಲ್ಲಿ ೩೫೪ ಅಥವಾ ೩೫೫ ದಿವಸಗಳು ಬರುತ್ತವೆ, ಅಂದರೆ, ವರ್ಷದಲ್ಲಿ ಒಮ್ಮೊಮ್ಮೆ ೩೫೪, ಮತ್ತು ಒಮ್ಮೊಮ್ಮೆ ೩೫೫ ದಿವಸಗಳು ಬರುತ್ತವೆ. ಈ ಪತ್ರಿಕೆಯಲ್ಲಿ ೩೫೪ ದಿವಸಗಳೆಂದು ಲೆಕ್ಕ ಮಾಡಲಾಗಿದೆ.

(೨) ತರಾವೀಹ್ ನಮಾಜದ ಒಟ್ಟು ಅವಧಿಯು ೩೦ ದಿವಸಗಳೆಂದು ಇದರಲ್ಲಿ ಲೆಕ್ಕ ಮಾಡಲಾಗಿದೆ.

(೩) ವರ್ಷದಲ್ಲಿ ಒಮ್ಮೊಮ್ಮೆ ೫೦, ಮತ್ತು ಒಮ್ಮೊಮ್ಮೆ ೫೧ ಶುಕ್ರವಾರಗಳು (ಜುಮ್ಮಾಗಳು) ಬರುತ್ತವೆ. ಆದ್ದರಿಂದ, ಜುಮ್ಮಾ-ನಮಾಜದ ವಿಷಯವಾಗಿ ಮತ್ತು ತತ್ಪರಿಣಾಮವಾಗಿ ಝೊಹರ್ ನಮಾಜಗಳ ವಿಷಯವಾಗಿ ಎರಡೆರಡು ಸಂಖ್ಯೆಗಳನ್ನು ಕೊಡಲಾಗಿದೆ.]

| ನಮಾಜದ ಹೆಸರು | ಫರ್ಜ ರಕಾತ | ಸುನ್ನತ್ ರಕಾತ | ವಾಜಬ್ ರಕಾತ | ನಫೀಲ್ ರಕಾತ | ಒಟ್ಟು ರಕಾತ |
|---|---|---|---|---|---|
| ನಮಾಜೆ-ಫಜ್ರ | ೭೦೮ | ೭೦೮ | | | ೧೪೧೬ |
| ನಮಾಜೆ-ಝೊಹರ್ | ೧೨೧೬ (೧೨೧೨) | ೧೮೨೪ (೧೮೧೮) | | ೬೦೮ | ೩೬೪೮ (೩೬೩೬) |
| ನಮಾಜೆ-ಅಸ್ರ | ೧೪೧೬ | ೧೪೧೬ | | | ೨೮೩೨ |
| ನಮಾಜೆ-ಮಗ್ರಿಬ್ | ೧೦೬೨ | ೭೦೮ | | ೭೦೮ | ೨೪೭೮ |
| ನಮಾಜೆ-ಇಷಾ | ೧೪೧೬ | ೨೧೨೪ | | ೭೦೮ | ೬೦೧೮ |
| ನಮಾಜೆ-ವಿತ್ರ | | | ೧೦೬೨ | ೭೦೮ | |
| ನಮಾಜೆ-ಜುಮ್ಮಾ | ೧೦೦ (೧೦೨) | ೫೦೦ (೫೧೦) | | ೩೦೦ (೩೦೬) | ೯೦೦ ೯೧೮) |
| ನಮಾಜೆ-ಫಿತ್ರ | | | ೨ | | ೨ |
| ನಮಾಜೆ-ದುಹಾ | | | ೨ | | ೨ |
| ನಮಾಜೆ-ತರಾವಿಹ್ | | ೬೦೦ | | | ೬೦೦ |
| ಒಟ್ಟು: ೫೦ ಶುಕ್ರವಾರಗಳಿದ್ದರೆ (೫೧ ಶುಕ್ರವಾರಗಳಿದ್ದರೆ) | ೫೯೧೮ (೫೯೧೬) | ೭೮೮೦ (೭೮೪೮) | ೧೦೬೬ | ೩೦೩೨ (೩೦೩೬) | ೧೭೮೯೬ (೧೭೯೦೨) |

# —ನಮಾಜೆ-ಜುಮ್ಮಾದ ಪದ್ಧತಿ—

ಶಿ:—"ನಮಾಜೆ-ಜುಮ್ಮಾ"ದ ಪದ್ಧತಿಯನ್ನು ಸವಿಸ್ತಾರವಾಗಿ ವಿವರಿಸಿ ಹೇಳುವಿರಾ ?

ಗುರು:—ಶುಕ್ರವಾರ ದಿವಸ ನಮಾಜೆ-ಜುಮ್ಮಾದ ವೇಳೆಗೆ ಸರಿಯಾಗಿ ಮಶೀದೆಗೆ ಹೋಗಿ ವಜೂ ಮಾಡಿಕೊಂಡು, "ತ್ಹತಲ್‘-ವಜೂ’ದ ಎರಡು ನಫೀಲ್‘ ರಕಾತಗಳ ನಮಾಜವನ್ನು ಮಾಡಬೇಕು; ಆ ಮೇಲೆ, "ತ್ಹತಲ್‘-ಮಸ್‘ಜಿದ’’ವ ಎರಡು ನಫೀಲ್‘ ರಕಾತಗಳ ನಮಾಜವನ್ನು ಮಾಡಬೇಕು; ತದನಂತರ (ಮುಅಝಿನ್‘ನು ಸಲಾತ್‘ ಹೇಳಿದ ನಂತರ), "ಕಬ್ಲಲ್‘‘ಜುಮ್ಮಾ"ದ ನಾಲ್ಕು ಸುನ್ನತ್‘ ರಕಾತಗಳ ನಮಾಜವನ್ನು ಮಾಡಬೇಕು. ಮಧ್ಯಾಹ್ನದ ಒಂದು ಘಂಟೆಯಾಗುತ್ತಲೇ, ಖತೀಬನು (ಪ್ರವಚನಕಾರನು) ಮೆಂಬರದ ಮೇಲೆ (ಗದ್ದಿಗೆಯ ಮೇಲೆ) ಎದ್ದು ನಿಂತು ಖುತಬಾ ಓದುವನು. ಖತೀಬನು ಖುತ್ಬಾ ಓದುವಾಗ ಎಲ್ಲರೂ ಶಾಂತಚಿತ್ತದಿಂದ ಕೇಳುತ್ತ ಕೂಡ್ರಬೇಕು. ಖತೀಬನು ಎರಡು ಖುತಬಾ ಓದುತ್ತಾನೆ. ಮೊದಲನೇಯದಕ್ಕೆ "ಖುತ್ಬಯೇ-ಊಲಾ" (ಪ್ರಥಮ-ಪ್ರವಚನ) ಅನ್ನುತ್ತಾರೆ, ಎರಡನೆಯದಕ್ಕೆ ‘‘ಖುತ್ಬಯೆ-ಸಾನಿ" (ದ್ವಿತೀಯ-ಪ್ರವಚನ) ಅನ್ನುತ್ತಾರೆ. ಖುತ್ಬಾ ಓದುವದು ಮುಗಿದ ನಂತರ, ಎರಡು ಫರ್ಜ-ರಕಾತಗಳ ನಮಾಜವು ಸಾಮೂಹಿಕವಾಗಿ ಅರ್ಪಿಸಲ್ಪಡುವದು. ಸಾಮೂಹಿಕ ನಮಾಜವು ಮುಗಿದ ನಂತರ ಪ್ರತಿಯೊಬ್ಬರು ಬೇರೆಬೇರೆಯಾಗಿ, ಬಾದಲ್‘-ಜುಮ್ಮಾ"ದ ನಾಲ್ಕು ಸುನ್ನತ್‘-ರಕಾತಗಳ ನಮಾಜವನ್ನೂ, ಆನಂತರ ಎರಡು ಸುನ್ನತ್‘-ರಕಾತಗಳ ನಮಾಜವನ್ನೂ, ತದನಂತರ ಎರಡು ನಫೀಲ್‘-ರಕಾತಗಳ ನಮಾಜವನ್ನೂ ಅರ್ಪಿಸಬೇಕು. ಇಷ್ಟೆಲ್ಲವಾದರೆ, ಶುಕ್ರವಾರದ ಪ್ರಾರ್ಥನೆಯು ಮುಗಿದಂತಾಯಿತು.

ಮೇಲೆ ವಿವರಿಸಿದಂತೆ ‘‘ನಮಾಜೆ-ಜುಮ್ಮಾ"ದಲ್ಲಿ ಒಟ್ಟು ಹದಿನೆಂಟು ರಕಾತಗಳಿರುತ್ತವೆ. ಅವು ಯಾವವೆಂದರೆ—

| | | | |
|---|---|---|---|
| (೧) ‘‘ತ್ಹತಲ್‘-ವಜೂ’ದ | ನಫೀಲ್‘-ರಕಾತಗಳು | .... | ೨ |
| (೨) "ತ್ಹತಲ್‘-ಮಸ್ಜಿದ’’ದ | ನಫೀಲ್‘-ರಕಾತಗಳು | .... | ೨ |
| (೩) ‘‘ಕಬ್ಲಲ್‘-ಜುಮ್ಮಾ’ದ | ಸುನ್ನತ್‘-ರಕಾತಗಳು | .... | ೪ |

| | | | |
|---|---|---|---|
| (೪) "ಜುಮ್ಮಾ"ದ | ಫರ್ಜ್-ರಕಾತಗಳು | .... | ೨ |
| (೫) "ಬಾದಲ್-ಜುಮ್ಮಾ"ದ | ಸುನ್ನತ್-ರಕಾತಗಳು | .... | ೪ |
| (೬) "ಬಾದಲ್-ಜುಮ್ಮಾ"ದ | ಸುನ್ನತ್-ರಕಾತಗಳು | .... | ೨ |
| (೭) "ಬಾದಲ್-ಜುಮ್ಮಾ"ದ | ನಫೀಲ್-ರಕಾತಗಳು | .... | ೨ |
| | ಒಟ್ಟು — | | ೧೮ |

## --"ನಮಾಜಿ-ಈದೈನ"ಗಳ ಪದ್ಧತಿ--

ಶಿಷ್ಯ:—"ನಮಾಜಿ-ಈದುಲ್‌ಫಿತ್ರ್" ಮತ್ತು ನಮಾಜಿ-ಈದುದ್ದುಹಾ' ಈ ಎರಡೂ ನಮಾಜಗಳನ್ನು ಮಾಡುವ ಪದ್ಧತಿಗಳನ್ನು ವಿವರಿಸಿ ಹೇಳುವಿರಾ ?

ಗುರು:—ರಮ್ಜಾನ ಅಥವಾ ಬಕ್ರೀದ್ ನಮಾಜಕ್ಕಾಗಿ ಊರ ಜನರೆಲ್ಲರೂ ಕೂಡಿಕೊಂಡು "ಈದಗಾಹ"ಕ್ಕೆ (ಈದ ನಮಾಜಕ್ಕಾಗಿಯೇ ಗೊತ್ತು ಮಾಡಲ್ಪಟ್ಟ ಮೈದಾನಕ್ಕೆ) ಹೋಗಿ, ಅಲ್ಲಿಯೇ ನಮಾಜ ಮಾಡಬೇಕು; ಆದರೆ, ಅಶಕ್ತರಿದ್ದವರು ಮತ್ತು ಮುಪ್ಪಿನವರು ಮಶೀದೆಯಲ್ಲಿ ಮಾಡಲು ಅಡ್ಡಿಯಿಲ್ಲ. ಈದಗಾಹಕ್ಕೆ ಹೋಗುವಾಗ "ತಕ್ಬೀರ" ಪಠಿಸುತ್ತ, ಅಂದರೆ, ಅಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್; ಲಾ ಇಲಾಹಾ ಇಅಲ್ಲಾಹುವಲ್ಲಾಹು ಅಕ್ಬರ್; ಲಾ ಇಲಾಹಾ ಇಲ್ಲಲ್ಲಾಹ" ಅಂತಾ ಪಠಿಸುತ್ತ ಹೋಗಬೇಕು. ಪ್ರತಿ ನಮಾಜದಲ್ಲಿ ಎರಡು ರಕಾತಗಳಿರುತ್ತವೆ. ಈ ಎರಡು ರಕಾತಗಳ ಪ್ರಾರ್ಥನೆಯನ್ನು ಆರು "ತಕ್ಬೀರ"ಗಳ (ಅಂದರೆ, "ಅಲ್ಲಾಹು-ಅಕ್ಬರ" ಎಂಬ ಆರು ಸೂಕ್ತಗಳ) ಸಹಿತಾಗಿ ಮಾಡಬೇಕಾಗುತ್ತದೆ. ಈ ನಮಾಜ ಮಾಡುವ ಪದ್ಧತಿಯು ಹೀಗಿರುತ್ತದೆ—

ಮೊದಲು "ಇನ್ನೀ ವಜ್ಜಹತು ವಜ್ಹಿಯ...." ಇದನ್ನು ಪಠಿಸಿದ ನಂತರ, ಹೀಗೆ ನಿಯ್ಯತ್ ಮಾಡಬೇಕು:—

"ನವೈತು ಅನ್ ಉಸೊಲ್ಲಿ ಲಿಲ್ಲಾಹಿ ತಆಲಾ, ರಕಾಅತೈನಿ ಮಅ ಸಿತ್ತ ತಕ್ಬೀರಾತಿನ್ ಸಲಾತುಲ್ ವಾಜಿಬುಲ್-ಫಿತ್ರ್ (ವಾಜಿಬುಝ್ಝುಹಾ) ಇಕ್ತದೈತು ಬಿ ಹಾಜಲ್ ಇಮಾಮ್, ಮುತವಜ್ಜಿಹನ್ ಇಲಾ ಜ್ಹತಿಲ್ ಕಾಬತಿಷ್ಷರೀಫತಿ"

[ಟಿಪ್ಪಣಿ:—ರಮ್ಜಾನ ಹಬ್ಬದ ಸಂದರ್ಭದಲ್ಲಿ "ವಾಜಿಬುಲ್-ಫಿತ್ರ್" ಅನ್ನಬೇಕು; ಮತ್ತು ಬಕ್ರೀದ ಹಬ್ಬದ ಸಂದರ್ಭದಲ್ಲಿ "ವಾಜಿಬುದ್ದುಹಾ" ಅನಬೇಕು.]

ಮೇಲಿನಂತೆ ನಿಯ್ಯತ್ ಮಾಡಿದ ನಂತರ, ಎರಡೂ ಕೈಗಳನ್ನು ಕಿವಿಗಳ ವರೆಗೆ ಮೇಲಕ್ಕೆತ್ತಿ "ಅಲ್ಲಾಹು-ಅಕ್ಬರ್" ಅಂತಾ ಪಠಿಸಿ, ಕೈಗಳನ್ನು ಹೊಂಕಳ ಭಾಗದ ಕೆಳಗೆ ಕಟ್ಟಿಕೊಳ್ಳಬೇಕು. ಆ ಮೇಲೆ 'ಸನಾ' ಪಠಿಸಬೇಕು. ಸನಾ ಪಠಿಸಿದ ನಂತರ, (೧) ಎರಡೂ ಕೈಗಳನ್ನು ಕಿವಿಗಳ ವರೆಗೆ ಮೇಲಕ್ಕೆತ್ತಿ 'ಅಲ್ಲಾಹು-ಅಕ್ಬರ್' ಅಂತಾ ಪಠಿಸಿ, ಕೈಗಳನ್ನು ನೀಟಾಗಿ ಕೆಳಗೆ ಬಿಡಬೇಕು. ಆ ಮೇಲೆ (೨) ಮತ್ತೊಮ್ಮೆ ಕೈಗಳನ್ನು ಮೇಲಕ್ಕೆತ್ತಿ "ಅಲ್ಲಾಹು-ಅಕ್ಬರ್" ಅಂತಾ ಪಠಿಸಿ, ಕೈಗಳನ್ನು ನೀಟಾಗಿ ಕೆಳಗೆ ಬಿಡಬೇಕು. ತದನಂತರ (೩) ಮಗದೊಮ್ಮೆ ಕೈಗಳನ್ನು ಕಿವಿಗಳ ವರೆಗೆ ಮೇಲಕ್ಕೆತ್ತಿ "ಅಲ್ಲಾಹು-ಅಕ್ಬರ್" ಅಂತಾ ಪಠಿಸಿ, ಕೈಗಳನ್ನು ಹೊಂಕಳ ಭಾಗದ ಕೆಳಗೆ ಕಟ್ಟಿಕೊಳ್ಳಬೇಕು.

ಆ ನಂತರ, ಪದ್ಧತಿಯ ಪ್ರಕಾರ ಮೊದಲನೇ ರಕಾತವನ್ನು ಪೂರ್ಣಿಸಿ, ಎರಡನೇ ರಕಾತವನ್ನು ಪ್ರಾರಂಭಿಸಬೇಕು. ಎರಡನೇ ರಕಾತದಲ್ಲಿ ಕುರಾನವನ್ನು ಪಠಿಸಿದ ನಂತರ. (೧) ಎರಡೂ ಕೈಗಳನ್ನು ಕಿವಿಗಳವರೆಗೆ ಮೇಲಕ್ಕೆತ್ತಿ "ಅಲ್ಲಾಹು-ಅಕ್ಬರ್" ಅಂತಾ ಪಠಿಸಿ, ಕೈಗಳನ್ನು ನೀಟಾಗಿ ಕೆಳಗೆ ಬಿಡಬೇಕು. ಆ ನಂತರ (೨) ಮತ್ತೊಮ್ಮೆ ಕೈಗಳನ್ನು ಕಿವಿಗಳವರೆಗೆ ಮೇಕ್ಕೆತ್ತಿ "ಅಲ್ಲಾಹು-ಅಕ್ಬರ್ ಅಂತಾ ಪಠಿಸಿ, ಕೈಗಳನ್ನು ನೀಟಾಗಿ ಕೆಳಗೆ ಬಿಡಬೇಕು. ತದನಂತರ (೩) ಮಗದೊಮ್ಮೆ ಕೈಗಳನ್ನು ಮೇಲಕ್ಕೆತ್ತಿ, "ಅಲ್ಲಾಹು-ಅಕ್ಬರ್" ಅಂತಾ ಪಠಿಸಿ, ಕೈಗಳನ್ನು ಹೊಂಕಳ ಭಾಗದ ಕೆಳಗೆ ಕಟ್ಟಿಕೊಳ್ಳಬೇಕು ಆ ಮೇಲೆ ಮತ್ತೆ "ಅಲ್ಲಾಹು-ಅಕ್ಬರ್" ಅನ್ನುತ್ತ ರುಕೂದಲ್ಲಿ ಹೋಗಬೇಕು. ರುಕು ಮುಗಿಸಿಕೊಂಡು, ಸಿಜ್ದಾಗಳನ್ನು ಮಾಡಿ, ಕಾಯ್ದಾದಲ್ಲಿ ಕುಳಿತು, "ಅತ್ತಹಿಯ್ಯಾತ" ಮೊದಲಾದವುಗಳನ್ನು ಪಠಿಸಿ, ಸಲಾಂ ಹೊರಳಬೇಕು. **ಇಲ್ಲಿಗೆ ನಮಾಜವು ಮುಗಿದಂತಾಯಿತು.** ನಮಾಜು ಮುಗಿದ ನಂತರ ಖತೀಬನು ಖುತ್ಬಾ ಓದುತ್ತಾನೆ. ಖತೀಬನು ಖುತ್ಬಾ ಓದುತ್ತಿರುವಾಗ ಎಲ್ಲರೂ ಶಾಂತಚಿತ್ತದಿಂದ ಕುಳಿತು ಕೇಳುತ್ತಿರಬೇಕು.

ಖುತ್ಬಾ ಮುಗಿದ ನಂತರ ಇಮಾಮನು "ದುಆ" ಪಠಿಸುವನು. ಇಮಾಮನು ದುಆ ಪಠಿಸುತ್ತಿರುವಾಗ, ಕುಳಿತವರೆಲ್ಲರೂ ಕೈಗಳನ್ನು ಜೋಡಿಸಿ ಮೇಲ ಕ್ಕೆತ್ತಿ "ಆಮೀನ್, ಆಮೀನ್" ಅನ್ನುತ್ತಿರಬೇಕು. "ದುಆ" ಪಠಣೆ ಮುಗಿದ ನಂತರ, ನಮಾಜಕ್ಕಾಗಿ ಕೂಡಿದ ಜನರೆಲ್ಲರೂ ಒಬ್ಬರಿನ್ನೊಬ್ಬರನ್ನು ಪ್ರೇಮ ದಿಂದ ಅಪ್ಪಿಕೊಂಡು ಅಥವಾ ಕೈಕುಲುಕಿಸಿ, ಅಭಿನಂದನೆಗಳನ್ನು ಅರ್ಪಿಸ ಬೇಕು. ಕೈಗಳನ್ನು ಕುಲುಕಿಸುವಾಗ ಅಥವಾ ಅಪ್ಪಿಕೊಳ್ಳುವಾಗ, "ಈದ ಮುಬಾರಕ್"(ಈ ಹಬ್ಬವು ನಿಮಗೆ ಮಂಗಳವಾಗಲಿ!) ಅಂತಾ ಅನ್ನಬೇಕು. ಇಷ್ಟೆಲ್ಲವಾದ ನಂತರ ದೀನ ದರಿದ್ರರಿಗೆ ಮತ್ತು ಫಕೀರರಿಗೆ ತನ್ನ ಶಕ್ತ್ಯಾನು ಸಾರವಾಗಿ ಭಿಕ್ಷೆಗಳನ್ನು(ಖೈರಾತ್) ಕೊಡಬೇಕು.

## —:ತರಾವೀಹ್ ನಮಾಜದ ಪದ್ಧತಿ:—

ಶಿಷ್ಯ:— ತರಾವೀಹ್ ನಮಾಜವನ್ನು ಯಾವಾಗ ಮಾಡುತ್ತಾರೆ? ಮತ್ತು ಅದನ್ನು ಮಾಡುವ ಪದ್ಧತಿಯು ಹೇಗಿರುತ್ತದೆ. ?

ಗುರು:— ತರಾವೀಹ್ ನಮಾಜವನ್ನು ರಮ್ಜಾನ ತಿಂಗಳಲ್ಲಿ ಪ್ರತಿ ದಿವಸ ರಾತ್ರಿಯಲ್ಲಿ ಮಾಡಬೇಕು. ಇಷಾ- ನಮಾಜವನ್ನು ಅರ್ಪಿಸಿದ ನಂತರ ತರಾವೀಹ್ ನಮಾಜವನ್ನು ಅರ್ಪಿಸಿ, ತದನಂತರ ವಿತ್ರ ನಮಾಜವನ್ನು ಅರ್ಪಿಸಬೇಕು. ರಮ್ಜಾನ ತಿಂಗಳದ ಚಂದ್ರನು ಕಂಡಂದಿನಿಂದ ಹಿಡಿದು ಮುಂದಿನ ತಿಂಗಳದ (ಷವ್ವಾಲ ತಿಂಗಳದ) ಚಂದ್ರನು ಕಾಣಿಸುವವರೆಗೆ ಪ್ರತಿ ದಿವಸ ಈ ನಮಾಜವನ್ನು ಆಚರಿಸಬೇಕು. ಷವ್ವಾಲ ತಿಂಗಳದ ಚಂದ್ರನು ಕಾಣಿಸಿಕೊಂಡ ನಂತರ ಈ ನಮಾಜವನ್ನು ಮಾಡಬಾರದು. ತರಾವೀಹ್ ನಮಾಜದಲ್ಲಿ ಒಟ್ಟು ಇಪ್ಪತ್ತು ರಕಾತುಗಳಿರುತ್ತವೆ. ಈ ಇಪ್ಪತ್ತು ರಕಾತುಗ ಳನ್ನು ಎರಡೆರಡರಂತೆ ಹತ್ತು ಸಾರೆ ಅರ್ಪಿಸಿ, ಪೂರ್ಣ ಮಾಡಬೇಕು, ಈ ಇಪ್ಪತ್ತು ರಕಾತಗಳನ್ನರ್ಪಿಸುವ ಪದ್ಧತಿಯು ಹೀಗೆ ಇರುತ್ತದೆ. :—

ಮೊದಲು ಇಷಾ ನಮಾಜದ ನಾಲ್ಕು ಸುನ್ನತ್-ರಕಾತ, ನಾಲ್ಕು ಫರ್ಜ-ರಕಾತ, ಎರಡು ಸುನ್ನತ್-ರಕಾತ, ಮತ್ತು ಎರಡು ನಫೀಲ್-ರಕಾತ, ಹೀಗೆ ಹನ್ನೆರಡು ರಕಾತಗಳನ್ನು ಅರ್ಪಿಸಿದ ನಂತರ ತರಾವೀ ನಮಾಜವನ್ನು ಪ್ರಾರಂಭಿಸಬೇಕು,

(೧) ಎಲ್ಲಕ್ಕೂ ಮೊದಲು, ಮಶೀದೆಯಲ್ಲಿದ್ದವರೆಲ್ಲರೂ ಕೂಡಿ ಎತ್ತರವಾದ ಧ್ವನಿಯಿಂದ ತರಾವೀಹ್ ನಮಾಜಿನ " ಸಲಾತ್ " ಪಠಿಸಬೇಕು. ಸಲಾತ್ ಹೀಗೆ ಇರುತ್ತದೆ. :—

"ಅಸ್ಸಲಾತು ಸುನ್ನತುತ್ತರಾವಿಹ್, ರ್ಹ್ಮತುಲ್ಲಾಹ್; ಲಾ ಇಲಾಹಾ ಇಲ್ಲಲ್ಲಾ ಹುವಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್, ವಲಿಲ್ಲಾ ಹಿಲ್‌ಹಮ್ದ್"

(೨) ಸಲಾತ್ ಪಠಿಸಿದ ನಂತರ ಎರಡು ರಕಾತಗಳ ನಿಯ್ಯತ್ ಹೀಗೆ ಮಾಡಬೇಕು. :—

"ನವೈತು ಅನ್ ಉಸೊಲ್ಲಿ ಲಿಲ್ಲಾಹಿತ ಆಲಾ, ರಕಾಅತೈನಿ ಸುನ್ನತುತ್ತರಾವೀಹ್ ಇಕ್ತದೈತು ಬಿ ಹಾಜಲ್ ಇಮಾಮ್, ಮುತವಜ್ಜಿಹನ್ ಇಲಾ ಜಹತಿಲ್ ಕಾಬತಿಷ್ಷರೀಫತಿ"

ನಿಯತ್ ಪಠಿಸಿದ್ದನಂತರ, ಪದ್ಧತಿಯಂತೆ ಎರಡು ರಕಾತಗಳ ನಮಾಜ ಮಾಬೇಕು. ಇದೇ ಪ್ರಕಾರವಾಗಿ ಎರಡೆರಡು ರಕಾತಗಳಂತೆ ಇಪ್ಪತ್ತೂ ರಕಾತಗಳನ್ನು ಅರ್ಪಿಸಿ ಪೂರ್ಣಿಸಬೇಕು.

(೩) ಎರಡನೇ ರಕಾತ, ಆರನೇ ರಕಾತ, ಹತ್ತನೇ ರಕಾತ, ಹದಿನಾಲ್ಕನೇ ರಕಾತ ಮತ್ತು ಹದಿನೆಂಟನೇ ರಕಾತಗಳು ಪೂರ್ಣವಾದ ನಂತರ ಪ್ರತಿ ಸಾರೆ, ಎಲ್ಲರೂ ಕೂಡಿ ಎತ್ತರವಾದ ಧ್ವನಿಯಿಂದ ಈ ಕೆಳಗಿನ ತಸ್ಬೀಹ್ ಪಠಿಸಬೇಕು. :—

"ಫಜಲುಮ್ಮಿನಲ್ಲಾಹಿ ವ ನೆಅಮತುಂವ್, ವ ಮಗ್ಫಿರ್‌ತುಂವ್ ವರ್ಹಮಹು; ಲಾ ಇಲಾಹಾ ಇಲ್ಲಲ್ಲಾ ಹುವಲ್ಲಾಹು ಅಕ್ಬರ್; ಅಲ್ಲಾಹು ಅಕ್ಬರ್ ವಲಿಲ್ಲಾ ಹಿಲ್‌ಹಮ್ದ್"

(೪) ನಾಲ್ಕನೇ ರಕಾತವು ಮುಗಿದ ನಂತರ, ಎಲ್ಲರೂ ಕೂಡಿ ಈ "ತಸ್ಬೀಹ್" ಯನ್ನು ಮೂರು ಸಾರೆ ಪಠಿಸಬೇಕು :—

"ಅಷ್ಹದು ಅಲ್ ಲಾ ಇಲಾಹಾ ಇಲ್ಲಲ್ಲಾಹು, ವ್ಹದಹು ವ ಲಾ ಷರೀಕಲಹು; ವ ಅಷ್ಹದು ಅನ್ನ, ಮುಹಮ್ಮದನ್ ಅಬ್ದುಹು ವ ರಸೂಲುಹು"

ಮೇಲಿನ ತಸ್ಬೀಹ್ ಪಠಿಸಿದ ನಂತರ, ಇಮಾಮನು ಯಾವದಾದರೊಂದು ದುಆ ಪಠಿಸಬೇಕು. ದುಆ ಪಠಣೆಯ ನಂತರ ಎಲ್ಲರೂ ಕೂಡಿ ಹೀಗೆ ಪಠಿಸಬೇಕು. :—

"ಅಲ್‌ಬಪವು ಮುಹಮುವನಿಲ್ ಮುಸ್ತಫಾ ಸೊಲ್ಲಲ್ಲಾಹು ಅಲೈಹಿ ವ ಸೊಲ್ಲಮ್; ಲಾ ಇಲಾಹಾ ಇಲ್ಲಲ್ಲಾ ಹುವಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್ ವಲಿಲ್ಲಾ ಹಿಲ್‌ಹಮ್ದು"

(೫) ಎಂಟನೇ ರಕಾತವು ಮುಗಿದ ನಂತರ, ಎಲ್ಲರೂ ಕೂಡಿ ಈ ಕೆಳಗಿನ "ದರೂದ್" ಮೂರು ಸಾರೆ ಪಠಿಸಬೇಕು. :---

"ಅಲ್ಲಾಹುಮ್ಮಾ ಸೊಲ್ಲೆ ಅಲಾ ಸಯ್ಯದಿನಾ ಮುಹಮ್ಮದಿಂವ್, ವ ಅಲಾ ಅಲಿ ಸಯ್ಯದಿನಾ ಮುಹಮ್ಮದಿಂವ್-ವಬಾರಿಕ್‌ವ ಸೊಲ್ಲಮ್ ಸೊಲ್ಲು ಅಲೈಹ್"

ದರೂದ್ ಪಠಿಸಿದ ನಂತರ, ಇಮಾಮನು ಯಾವುದಾದರೊಂದು ದುಆ ಪಠಿಸಬೇಕು. ದುಆ- ಪಠಣೆಯಾದ ನಂತರ, ಎಲ್ಲರೂ ಕೂಡಿ ಹೀಗೆ ಅನ್ನಬೇಕು :---

"ಖಲೀಫತುರ್‍ರಸೂಲಿಲ್ಲಾಹಿ ಬಿತ್ತಹಕೀಕ್, ಅಮೀರಿಲ್ ಮೂಮಿನೀನ್, ಇಮಾಮುಲ್ ಮುತ್ತಕೀನ್, ಹಜರತ್ ಅಬೂಬಕರ ಸಿದ್ದೀಕ ರದಿಯಲ್ಲಾಹು ತಆಲಾ ಅನ್‌ಹು; ಲಾ ಇಲಾಹಾ ಇಲ್ಲಲ್ಲಾ ಹುವಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್ ವಲಿಲ್ಲಾ ಹಿಲ್‌ಹಮ್ದು"

(೬) ಹನ್ನೆರಡನೇ ರಕಾತವು ಮುಗಿದ ನಂತರ, ಎಲ್ಲರೂ ಕೂಡಿ ಈ ತಸ್ಬೀಹ್ ಮೂರು ಸಾರೆ ಪಠಿಸಬೇಕು:-

"ಸುಬ್ಹಾನಲ್ಲಾಹಿ ವಲ್‌ಹಮ್ದುಲಿಲ್ಲಾಹಿ, ವ ಲಾ ಇಲಾಹಾ ಇಲ್ಲಲ್ಲಾಹು ವಲ್ಲಾಹು ಅಕ್ಬರ್, ವ ಲಾಹೌಲ ವ ಲಾ ಕುವ್ವತ, ಇಲ್ಲಾ ಬಿಲ್ಲಾಹಿಲ್ ಅಲೀಯ್ಯಿಲ್ ಅಝೀಮ್"

ಮೇಲಿನ ತಸ್ಬೀಹ್ ಪಠಿಸಿದ ನಂತರ, ಇಮಾಮನು ದುಆ ಪಠಿಸಬೇಕು. ದುಆ-ಪಠಣೆ ಮುಗಿದ ನಂತರ, ಎಲ್ಲರೂ ಕೂಡಿ ಹೀಗೆ ಅನ್ನಬೇಕು:-

"ಮುಜಯ್ಯಿನಿಲ್ ಮಸ್‌ಜಿದಿ ವಲ್-ಮೆಂಬರಿ ವಲ್-ಮೆಹರಾಬ, ಅಮೀರಿಲ್ ಮೂಮಿನೀನ್, ಇಮಾಮುಲ್ ಮುತ್ತಕೀನ್, ಹಜರತ್ ಸಯ್ಯದಿನಾ ಉಮರ್ ಇಬ್ನಿ ಖಿತ್ತಾಬ್ ರದಿಯಲ್ಲಾಹು ತಆಲಾ ಅನ್‌ಹು; ಲಾ ಇಲಾಹಾ ಇಲ್ಲಲ್ಲಾ ಹುವಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್ ವಲಿಲ್ಲಾ ಹಿಲ್‌ಹಮ್ದು"

(೭) ಹದಿನಾರನೇ ರಕಾತವು ಮುಗಿದ ನಂತರ, ಎಲ್ಲರೂ ಕೂಡಿ ಈ ತಸ್ಬೀಹ್ ಮೂರು ಸಾರೆ ಪಠಿಸಬೇಕು:-

"ಸುಬ್ಹಾನಲ್ಲಾಹಿ ಬಿಹಮ್ದಿಹಿ, ಸುಬ್ಹಾನಲ್ಲಾಹಿಲ್ ಅಲೀಯ್ಯಿಲ್-ಅಝೀಮಿ ಬಿಹಮ್ದಿಹೀ; ಅಸ್ತಗ್ಫಿರುಲ್ಲಾಹ್ ರಬ್ಬೀ, ಮಿನ್ ಕುಲ್ಲಿ ಜಂಬಿಂವ್ ವ ಖತಿಅತಿಂವ್, ವ ಅತೂಬು ಇಲೈಹಿ."

ಇದಾದ ನಂತರ ಇಮಾಮನು ದುಆ ಪಠಿಸುವನು. ದುಆ ಪಠಣೆ ಮುಗಿದ ನಂತರ, ಎಲ್ಲರೂ ಕೂಡಿ ಹೀಗೆ ಅನ್ನಬೇಕು:—

"ಜಾಮಿಯಿಲ್-ಕುರ್ ಆನ್, ಕಾಮಿಲಿಲ್-ಹ್ಯಾಯಿ ವಲ್-ಈಮಾನ್, ಅಮೀರಿಲ್ ಮೂಮಿನೀನ್, ಇಮಾಮುಲ್ ಮುತ್ತಕೀನ, ಹಜರತ್ ಸಯ್ಯಿದಿನಾ ಉಸ್ಮಾನ ಇಬ್ನಿ ಅಫ್ಫಾನ ರದಿಯಲ್ಲಾಹು ತಆಲಾ ಅನ್‌ಹು; ಲಾ ಇಲಾಹಾ ಇಲ್ಲಲ್ಲಾ ಹುವಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್ ವಲಿಲ್ಲಾಹಿಲ್‌ಹಮ್ದ."

(೮) ಇಪ್ಪತ್ತನೇ ರಕಾತವು ಮುಗಿದ ನಂತರ, ಎಲ್ಲರೂ ಕೂಡಿ ಕೆಳಗಿನ ತಸ್ಬೀಹ್ ಮೂರು ಸಾರೆ ಪಠಿಸಬೇಕು:-

"ಅಸ್ತಗ್ಫಿರುಲ್ಲಾಹ್, ಅಸ್ತಗ್ಫಿರುಲ್ಲಾಹ್ ಅಲೀಯ್ಯಿಲ್-ಅಝೀಮ್, ಅಲ್ಲಜೀ ಲಾ ಇಲಾಹಾ ಇಲ್ಲಲ್ಲಾಹು ವಲ್-ಹಯ್ಯುಲ್ಕಯ್ಯೂಮ್, ಗಫ್ಫಾರು ಜ್ಜುನೂಬ, ಸತ್ತಾರುಲ್-ಉಯೂಬ, ಅಲ್ಲಮುಲ್-ಗಯೂಬ, ಕಷ್ಷಾಫುಲ್-ಕುರೂಬ್+ವ ಯಾ ಮುಕಲ್ಲಿಬಲ್-ಕುಲೂಬ ವಲ್-ಅಬ್‌ಸಾರಿ, ವ ಅತೂಬು ಇಲೈಹ್."

ತಸ್ಬೀಹ್ ಪಠಿಸಿದ ನಂತರ, ಇಮಾಮನು ದುಆ ಪಠಿಸಬೇಕು. ದುಆ ಪಠಣೆ ಮುಗಿದ ನಂತರ, ಎಲ್ಲರೂ ಕೂಡಿ ಹೀಗೆ ಅನ್ನಬೇಕು:-

"ಅಸದಿಲ್ಲಾಹಿಲ್-ಗಾಲಿಬ್, ಮಜ್ಹರಿಲ್-ಅಜಾಯಿಬಿ ವಲ್-ಗರಾಯಿಬಿ, ಇಮಾಮುಲ್ ಮುಷಾರಿಕಿ ವಲ್-ಮಗಾರಿಬಿ, ಅಮೀರಿಲ್ ಮೂಮಿನೀನ್, ಇಮಾಮುಲ್ ಮುತ್ತಕೀನ್, ಹಜರತ್ ಸಯ್ಯಿದಿನಾ ಅಲೀ ಇಬ್ನಿ ಅಬೂತಾಲಿಬ್ ರದಿಯಲ್ಲಾಹು ತಆಲಾ ಅನ್‌ಹು; ಲಾ ಇಲಾಹಾ ಇಲ್ಲಲ್ಲಾ ಹುವಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್ ವಲಿಲ್ಲಾ-ಹಿಲ್‌ಹಮ್ದ."

**ಇಲ್ಲಿಗೆ ತರಾವೀಹ್ ನಮಾಜವು ಸಮಾಪ್ತವಾದಂತಾಯಿತು.**

ಮೇಲಿನ ಪದ್ಧತಿಯಂತೆ ತರಾವೀಹ್ ನಮಾಜವನ್ನು ಮುಗಿಸಿದ ನಂತರ ವಿತ್ರ ನಮಾಜವನ್ನು ಪ್ರಾರಂಭಿಸಬೇಕು. ವಿತ್ರ ನಮಾಜವನ್ನು

ಪ್ರಾರಂಭಿಸುವದಕ್ಕಿಂತ ಮೊದಲು ಎಲ್ಲರೂ ಕೂಡಿ ವಿತ್ರ ನಮಾಜದ ಸಲಾತ್ ಪಠಿಸಬೇಕು. ಸಲಾತ್ ಹೀಗಿರುತ್ತದೆ:-

"ಅಸ್ಸೊಲಾತು ವಾಜಿಬುಲ್-ವಿತ್ರ ರ್ಹಮಕುಮುಲ್ಲಾಹ್; ಲಾ ಇಲಾಹಾ ಇಲ್ಲಲ್ಲಾ ಹುವಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್, ವಲಿಲ್ಲಾ ಹಿಲ್‌ಹಮ್ದು"

ಸಲಾತ್ ಪಠಿಸಿದ ನಂತರ, ವಿತ್ರ ನಮಾಜದ ಮೂರು ರಕಾತಗಳ ಪ್ರಾರ್ಥನೆಯನ್ನು ಸಾಮೂಹಿಕವಾಗಿ ಅರ್ಪಿಸಿ, ಎಲ್ಲರೂ ಕೂಡಿ ಮೂರು ಸಾರೆ ಈ ತಸ್ಬೀಹ್ ಪಠಿಸಬೇಕು:-

"ಸುಬ್ಹಾನಜಿಲ್‌ಮುಲ್ಕಿ ವಲ್‌ಮಲಕೂತ, ಸುಬ್ಹಾನಜಿಲ್ ಇಜ್ಜತಿ ವಲ್‌ಅಜ್ಮತಿ ವಲ್-ಹೈಬತಿ ವಲ್-ಕುದ್ರತಿ, ವಲ್-ಬಹಾಹಿ ವಲ್-ಕಿಬ್ರಿಯಾಯಿ, ವಲ್ ಜಬರೂತ್; ಸುಬ್ಹಾನಲ್-ಮುಲಿಕಿಲ್-ಕುದ್ದೂಸ, ಸುಬ್ಹಾನಲ್-ಮಲಿಕಲ್ ಹುವಲ್ಲಜೀ, ಲಾ ಯನಾಮೂ ವ ಲಾ ಯಮೂತು ವ ಲಾ ಯಫೂತು ಸುಬ್ಬೂಹುನ್ ಕುದ್ದೂಸುನ್ ರಬ್ಬನಾ, ವ ರಬ್ಬುಲ್‌ಮಲಾಯಿಕತು ವರ‍್ರೂಹ್."

ಆ ನಂತರ ಎರಡು ನಫೀಲ್ ರಕಾತಗಳ ನಮಾಜವನ್ನು ಮಾಡಬೇಕು. ಕಟ್ಟಕಡೆಗೆ ಕೊನೆಯ "ದುಆ" ಪಠಿಸಬೇಕು.

## — ನಮಾಜೆ ವಿತ್ರ —

ಶಿಷ್ಯ:— ವಿತ್ರ ನಮಾಜವನ್ನು ಪ್ರತಿ ದಿವಸ ಯಾವ ವೇಳೆಯಲ್ಲಿ ಆಚರಿಸಬೇಕು? ಮತ್ತು ಅವನ್ನು ಹೇಗೆ ಆಚರಿಸಬೇಕು?

ಗುರು:— ವಿತ್ರ ನಮಾಜವನ್ನು ಪ್ರತಿ ದಿವಸ ರಾತ್ರಿಯಲ್ಲಿ ಅರ್ಪಿಸಬೇಕು. ಇಷಾ-ನಮಾಜವು ಮುಗಿಯುತ್ತಲೇ, ವಿತ್ರ ನಮಾಜವನ್ನು ಅರ್ಪಿಸಬೇಕು. ಈ ನಮಾಜದಲ್ಲಿ ಮೂರು ರಕಾತಗಳಿರುತ್ತವೆ. ಅದನ್ನು ಆಚರಿಸುವ ಪದ್ಧತಿಯು ಹೀಗೆ ಇರುತ್ತದೆ:-

ಮೊದಲು "ಇನ್ನೀ ವಜ್‌ಹತು ವಜ್‌ಹಿಯ...." ಇದನ್ನು ಪಠಿಸಿ, ವಿತ್ರ ನಮಾಜದ ನಿಯ್ಯತ್ ಮಾಡಬೇಕು. ಆ ಮೇಲೆ ಪದ್ಧತಿಯ ಪ್ರಕಾರವಾಗಿ ಎರಡು ರಕಾತಗಳನ್ನು ಮುಗಿಸಿ ಕಾಯ್ದಾದಲ್ಲಿ ಕುಳಿತು "ಅತ್ತಹಿಯ್ಯಾತ್" ವನ್ನು ಪಠಿಸಿ, ಮೇಲಕ್ಕೆ ಎದ್ದು ನಿಂತು ಮೂರನೇ ರಕಾತವನ್ನು

ಪ್ರಾರಂಭಿಸಬೇಕು. ಮೂರನೇ ರಕಾತದಲ್ಲಿ " ಸೂರಿ-ಫಾತಿಹಾ " ಮತ್ತು " ಸೂರೆ ಅಖ್ಲಾಸ್ "ಗಳನ್ನು ಪಠಿಸಿದ ನಂತರ, ಎರಡೂ ಕೈಗಳನ್ನು ಕಿವಿ ಗಳ ವರೆಗೆ ಮೇಲಕ್ಕೆತ್ತಿ, " ಅಲ್ಲಾಹು-ಅಕ್ಬರ್ " ಅಂತಾ ಅಂದು, ಮತ್ತೆ ಕೈಗಳನ್ನು ಹೊಂಕಳ ಭಾಗದ ಕೆಳಗೆ ಕಟ್ಟಿಕೊಳ್ಳಬೇಕು. ಆ ಮೇಲೆ " ದುಆಯೆ-ಕುನೂತ್" ವನ್ನು ಪಠಿಸಿ ರುಕು ಮಾಡಬೇಕು. ರಕೂ ಸಿಜ್ದಾ ಗಳನ್ನು ಪೂರ್ಣಿಸಿ, ಕಾಯ್ದಾದಲ್ಲಿ ಕುಳಿತು " ಅತ್ತಹಿಯ್ಯಾತ್ " ಮೊದ ಲಾದವುಗಳನ್ನು ಪಠಿಸಿ, ಸಲಾಮ್ ಹೊರಳಬೇಕು.

ಈ ನಮಾಜದ ಮೂರನೇ ರಕಾತದಲ್ಲಿ " ದುಆಯೆ-ಕುನೂತ್"ವನ್ನು ಪಠಿಸಲೇ ಬೇಕಾಗುತ್ತದೆ. ದುಆಯೆ-ಕುನೂತ್ ಪಠಿಸಲು ಬಾರದಿದ್ದರೆ, ಅದರ ಬದಲಾಗಿ, " ಅಲ್ಲಾಹುಮ್ಮಗ್ಫಿರ್ಲಿ " ಅಂತಾ ಮೂರು ಸಾರೆ ಪಠಿಸಬೇಕು.

## —: ನಮಾಜೆ ತಹಜ್ಜುದ್ :—

ಶಿಷ್ಯ :— ನಮಾಜೆ ತಹಜ್ಜುದ್ ಅಂದರೆ ಯಾವದು ? ಅದನ್ನು ಹೇಗೆ ಅರ್ಪಿಸಬೇಕು ?

ಗುರು:— ಈ ನಮಾಜವು ಐಚ್ಛಿಕ ನಮಾಜವಿರುತ್ತದೆ. ಇದನ್ನು ಮಾಡಲೇಬೇಕೆಂಬ ಬಂಧನವಿಲ್ಲ. ಆದರೆ, ಈ ನಮಾಜವನ್ನು ಅರ್ಪಿಸುವದ ರಿಂದ ಪಾಪಗಳೆಲ್ಲ ಪರಿಹಾರವಾಗುವವು. ಈನಮಾಜವನ್ನು ಪ್ರತಿ ದಿನ ಮಧ್ಯ ರಾತ್ರಿಯ ನಂತರ ಅರ್ಪಿಸಬೇಕು.

ತಹಜ್ಜುದ್ ನಮಾಜವನ್ನು ಮಾಡುವವರು, ವಿತ್ರ ನಮಾಜವನ್ನು "ಇಷಾದ" ನಂತರ ಅರ್ಪಿಸದಲೇ, "ತಹಜ್ಜುದ್" ನಮಾಜದ ನಂತರ ಅರ್ಪಿಸಬೇಕು. ತಹಜ್ಜುದ್ ನಮಾಜದಲ್ಲಿ ಹನ್ನೆರಡು ರಕಾತಗಳಿರುತ್ತವೆ. ಈ ನಮಾಜವನ್ನು ಮಾಡುವ ಪದ್ಧತಿಯು ಹೀಗಿರುತ್ತದೆ :—

ಪ್ರತಿ ರಕಾತವಲ್ಲಿ ಮೊದಲು ಸೂರೆ ಫಾತಿಹಾ ಪಠಿಸಬೇಕು. ಸೂರೆ ಫಾತಿಹಾ ಪಠಿಸಿದ ನಂತರ, ಮೊದಲನೇ ರಕಾತದಲ್ಲಿ ಸೂರೆ "ಅಖ್ಲಾಸ್" ವನ್ನು ಹನ್ನೆರಡು ಸಾರೆ ಪಠಿಸಬೇಕು; ಎರಡನೇ ರಕಾತವಲ್ಲಿ ಹನ್ನೊಂದು

ಸಾರೆ, ಮೂರನೇದ್ದರಲ್ಲಿ ಹತ್ತುಸಾರೆ, ನಾಲ್ಕನೇದ್ದರಲ್ಲಿ ಒಂಭತ್ತು ಸಾರೆ, ಐದನೇದ್ದರಲ್ಲಿ ಎಂಟು ಸಾರೆ..........ಹನ್ನೆರಡನೇ ರಕಾತದಲ್ಲಿ ಒಂದು ಸಾರೆ ಪಠಿಸಬೇಕು. ಈ ರೀತಿಯಾಗಿ ಹನ್ನೆರಡು ರಕಾತಗಳನ್ನು ಪೂರ್ಣಿಸಿದರೆ, ನಮಾಜೆ-ತಹಜ್ಜುದ್ ಮುಗಿದಂತಾಯಿತು.

[ನಮಾಜೆ ತ್ಹಜ್ಜುದ್‌ವನ್ನು ಅರ್ಪಿಸುವ ಪದ್ಧತಿಗಳು ಮತ್ತೂ ಬೇರೆ ಇವೆ. ಮೇಲಿನದು ಅತಿ ಸರಳಾದ ಪದ್ಧತಿಯಾಗಿದೆ.
—ಲೇಖಕರು ]

## —ನಮಾಜೆ-ಆಷೂರಾ—

ಶಿಷ್ಯ:— "ನಮಾಜೆ-ಆಷೂರಾ" ಅಂದರೆ ಯಾವದು ? ಅದನ್ನು ಯಾವಾಗ ಮತ್ತು ಯಾವ ರೀತಿಯಾಗಿ ಆಚರಿಸಬೇಕು ?

ಗುರು:— ಇದೂ ಸಹ ಒಂದು ಐಚ್ಛಿಕ ನಮಾಜವಾಗಿದೆ. ವರ್ಷದಲ್ಲಿ ಒಂದೇಸಾರೆ ಇದನ್ನು ಆಚರಿಸಬೇಕಾಗುತ್ತದೆ. ಈ ನಮಾಜವನ್ನು ಆಚರಿಸಿದರೆ ವರ್ಷದ ಪಾಪಗಳೆಲ್ಲ ಪರಿಹಾರವಾಗುವವು. ಪ್ರತಿವರ್ಷ ಮ್ಹೊರಮ್ ತಿಂಗಳದ ೧೦ನೇ ತಾರೀಖಿನ ದಿವಸ ಮುಂಜಾನೆ, ಸೂರ್ಯೋದಯ ನಂತರ, ಈ ನಮಾಜವನ್ನು ಅರ್ಪಿಸಬೇಕು. ಈ ನಮಾಜದಲ್ಲಿ ಆರು ರಕಾತುಗಳಿರುತ್ತವೆ. ಈ ನಮಾಜವನ್ನು ಅರ್ಪಿಸುವ ಪದ್ಧತಿಯು ಹೀಗೆ ಇರುತ್ತದೆ:—

ಈ ನಮಾಜದ ಪ್ರತಿ ರಕಾತದಲ್ಲಿ ಕೆಳಗಿನ ಸೂರಾತ್‌ಗಳನ್ನು ಪಠಿಸಬೇಕು.

(೧) ಸೂರೆ-ಫಾತಿಹಾ — ಒಂದು ಸಾರೆ
(೨) ಸೂರೆ-ಷಮ್ಸ — ಒಂದು ಸಾರೆ
(೩) ಸೂರೆ-ಕದ್ರ — ಹನ್ನೆರಡು ಸಾರೆ
(೪) ಸೂರೆ-ಜಿಲ್‌ಜಾಲ್— ಒಂದು ಸಾರೆ
(೫) ಸೂರೆ-ಇಖ್ಲಾಸ್ — ಒಂದು ಸಾರೆ

ಆರೂ ರಕಾತಗಳು ಮುಗಿದ ನಂತರ ಮತ್ತೆ ಸಿಜ್ದಾ ಮಾಡಬೇಕು; ಮತ್ತು ಸಿಜ್ದಾದಲ್ಲಿ ಇದ್ದಾಗ (ಸಾಸ್ಟಾಂಗದ ಅವಸ್ಥೆಯಲ್ಲಿದ್ದಾಗ) "ಸೂರೆ-

ಕಾಫಿರೂನ್" ವನ್ನು ಏಳು ಸಾರೆ ಪಠಿಸಬೇಕು. ಇಲ್ಲಿಗೆ ನವಾಜವು ಮುಗಿದಂತಾಯಿತು.

## —ನಮಾಜೆ-ಇಶ್ರಾಕ್—

ಶಿಷ್ಯ:—ನಮಾಜೆ-ಇಶ್ರಾಕ್ ಅಂದರೆ ಯಾವದು? ಅದನ್ನು ಹೇಗೆ ಮತ್ತು ಯಾವಾಗ ಆಚರಿಸಬೇಕು?

ಗುರು:—ಇದೂ ಸಹ ಒಂದು ಐಚ್ಛಿಕ ನಮಾಜವಾಗಿದೆ. ಪ್ರತಿ ದಿವಸ ಮುಂಜಾನೆ, ಸೂರ್ಯೋದಯವಾದ ಹತ್ತು ಮಿನಿಟುಗಳ ನಂತರ, ಈ ನಮಾಜವನ್ನು ಅರ್ಪಿಸಬೇಕು. ಈ ನಮಾಜದಲ್ಲಿ ಎರಡು ರಕಾತಗಳಿರುತ್ತವೆ. (ನಾಲ್ಕು ರಕಾತಗಳನ್ನು ಸಹ ಅರ್ಪಿಸಲಿಕ್ಕೆ ಬರುತ್ತದೆ—ಲೇಖಕ) ಇತರ ನಮಾಜಗಳ ಪದ್ಧತಿಯಂತೆಯೇ ಈ ನಮಾಜವನ್ನು ಅರ್ಪಿಸಬೇಕು.

## ನಮಾಜೆ-ಷುಕ್ರಾನಾ

ಶಿಷ್ಯ:—"ನಮಾಜೆ-ಷುಕ್ರಾನಾ" ಅಂದರೆ ಏನು?

ಗುರು:—ಮನಸ್ಸಿನ ಬಯಕೆಯು ಈಡೇರಿದಾಗ, ಅಥವಾ ಯಾವದಾದರೊಂದು ಸಂತೋಷದ ಸುದ್ದಿಯು ಬಂದು ಮುಟ್ಟಿದಾಗ, ಪರಮಾತ್ಮನಿಗೆ ಕೃತಜ್ಞತೆಗಳನ್ನು ಸಲ್ಲಿಸುವದಕ್ಕಾಗಿ ಎರಡು ನಫೀಲ್-ರಕಾತಗಳನ್ನು ಅರ್ಪಿಸುವದಕ್ಕೆ "ನಮಾಜೆ-ಷುಕ್ರಾನಾ" (ಕೃತಜ್ಞತೆಯ-ಪ್ರಾರ್ಥನೆ) ಅನ್ನುತ್ತಾರೆ.

## —ನಮಾಜೆ-ಅಸ್ತಫ್ಘಾರ್—

ಶಿಷ್ಯ:—ನಮಾಜೆ-"ಅಸ್ತಫ್ಘಾರ್" ಅಂದರೆ ಏನು?

ಗುರು:—ಗೊತ್ತಾಗದಲೆ, ಅಥವಾ ಅನಿವಾರ್ಯವಾಗಿ ಯಾವದಾದರೊಂದು ಅಧರ್ಮಿಕವಾದ ಪಾಪಕೃತಿಯನ್ನು ಮಾಡಿದ್ದಾದರೆ, ಆ ಕೃತಿಗಾಗಿ ಪಶ್ಚಾತ್ತಾಪ ಪಟ್ಟು, ಪರಮಾತ್ಮನ ಕ್ಷಮೆಯನ್ನು ಕೋರುವದಕ್ಕಾಗಿ ಎರಡು ನಫೀಲ್-ರಕಾತಗಳನ್ನು ಅರ್ಪಿಸುವದಕ್ಕೆ "ನಮಾಜೆ-ಅಸ್ತಫ್ಘಾರ್" (ಕ್ಷಮಾಯಾಚನೆಯ ಪ್ರಾರ್ಥನೆ) ಅನ್ನುತ್ತಾರೆ;

## —ನಮಾಜೆ-ಜನಾಜಾ—

ಶಿಷ:—"ನಮಾಜೆ-ಜನಾಜಾ" ಅಂದರೆ ಏನು? ಅದನ್ನು ಯಾವಾಗ ಮತ್ತು ಹೇಗೆ ಆಚರಿಸಬೇಕು?

ಗುರು:—'ನಮಾಜೆ-ಜನಾಜಾ' ಅಂದರೆ, "ಪ್ರೇತ-ಪ್ರಾರ್ಥನೆ" ಅರ್ಥಾತ್ ಮೃತದೇಹದ ಸಲುವಾಗಿ ಅರ್ಪಿಸಲ್ಪಡುವ ಪ್ರಾರ್ಥನೆ.

(ಈ ಗ್ರಂಥದ ಮೂರನೇ ಭಾಗದಲ್ಲಿರುವ "ಕಫನ್-ದಫನ್" ಎಂಬ ಅಧ್ಯಾಯ ಲ್ಲಿದ್ದ ಈ ನಮಾಜದ ಪದ್ಧತಿಯನ್ನು ಸವಿಸ್ತಾರವಾಗಿ ವಿವರಿಸಲಾಗಿದೆ—ಲೇಖಕ)

**—ನಮಾಜೆ-ಕಜಾ—**

ಶಿಷ್ಯ:—"ನಮಾಜೆ-ಕಜಾ" ಅಂದರೆ ಏನು?

ಗುರು:—'ಕಜಾ' ಈ ಶಬ್ದದ ಅರ್ಥವು "ತಡವಾದದ್ದು" ಅಂತಾ ಆಗುತ್ತದೆ. ಯಾವದೇ ಅನಿವಾರ್ಯ ಕಾರಣದ ಮೂಲಕ, ನೇಮಿತವಾದ ವೇಳೆಯು ಮುಗಿಯುವದರೊಳಗಾಗಿ ನಮಾಜಮಾಡುವದು ಶಕ್ಯವಾಗದ್ದ ರಿಂದ, ಯಾವದಾದರೊಂದು ನಮಾಜವು ಅಥವಾ ಕೆಲವು ನಮಾಜಗಳು ತಪ್ಪಿಹೋದರೆ, ಅನಿವಾರ್ಯವಾದ ಕಾರಣಗಳು ದೂರಾಗುತ್ತಲೇ, ತಪ್ಪಿ ಹೋದಂಥ ನಮಾಜವನ್ನು ಅಥವಾ ನಮಾಜಗಳನ್ನು ಅರ್ಪಿಸುವದಕ್ಕೆ "ನಮಾಜೆ-ಕಜಾ" ಅಥವಾ 'ಕಜಾ-ನಮಾಜ' ಅನ್ನುತ್ತಾರೆ. ಉದಾಹರಣಾ ರ್ಥವಾಗಿ, ಪ್ರಾತ:ಕಾಲದ ಪ್ರಾರ್ಥನೆಯು ಯಾವದೇ ಅನಿವಾರ್ಯ ಕಾರ ಣದ ಮೂಲಕ ತಪ್ಪಿಹೋದರೆ, ಮುಂದೆ ಮಧ್ಯಾಹ್ನದಲ್ಲಿಯಾಗಲಿ ಅಥವಾ ಇಳಿಹೊತ್ತಿನಲ್ಲಿಯಾಗಲಿ ತಮಗೆ ಅನುಕೂಲವಾದಾಗ ಪ್ರಾತ:ಕಾಲದ ಪ್ರಾರ್ಥನೆಯನ್ನು ಅರ್ಪಿಸಬೇಕಾಗುತ್ತದೆ. ಹೀಗೆ ಸಮಯ ಮೀರಿದ ನಂತರ ಅರ್ಪಿಸಲ್ಪಟ್ಟ ಆ ಪ್ರಾರ್ಥನೆಗೆ "ಪ್ರಾತ:ಕಾಲದ ತಡವಾದ ಪ್ರಾರ್ಥನೆ" (ನಮಾಜೆ-ಫಜ್ರ-ಕಜಾ) ಅನ್ನುತ್ತಾರೆ.

**—ಹೆಂಗಸರು ನಮಾಜ ಮಾಡುವ ಪದ್ಧತಿ—**

ಶಿಷ್ಯ:—ಗಂಡಸರ ಮತ್ತು ಹೆಂಗಸರ ನಮಾಜ ಮಾಡುವ ಪದ್ಧತಿ ಗಳಲ್ಲಿ ವ್ಯತ್ಯಾಸಗಳೇನಾದರೂ ಇರುತ್ತವೆಯೋ?

ಗುರು:—ಅಹುದು ಇರುತ್ತವೆ. ಆ ವ್ಯತ್ಯಾಸಗಳು ಯಾವವೆಂದರೆ—

(೧) ನಿಯ್ಯತ್ ಮಾಡಿದ ನಂತರ, ಗಂಡಸರು ಕೈಗಳನ್ನು ಕಿವಿಗಳ ವರೆಗೆ ಮೇಲಕ್ಕೆತ್ತುತ್ತಾರೆ; ಆದರೆ, ಹೆಂಗಸರು ಭುಜಗಳವರೆಗೆ ಕೈಗಳನ್ನು ಮೇಲಕ್ಕೆತ್ತಬೇಕು.

(೨) ನಮಾಜ ಮಾಡುವಾಗ, ಗಂಡಸರು ಎರಡೂ ಕೈಗಳನ್ನು ಹೊಂಕಳ ಭಾಗದ ಕೆಳಗೆ ಕಟ್ಟಿಕೊಳ್ಳುತ್ತಾರೆ; ಆದರೆ, ಹೆಂಗಸರು ಎದೆಯ ಮೇಲೆ ಹಸ್ತಗಳನ್ನು ಒಂದರ ಮೇಲೊಂದರಂತೆ ಇಟ್ಟುಕೊಳ್ಳಬೇಕು.

(೩) ಸಿಜ್ದಾ ಮಾಡುವಾಗ, ಗಂಡಸರು ಅಂಗೈಗಳನ್ನು ನೆಲಕ್ಕೆ ಊರುತ್ತಾರೆ; ಆದರೆ, ಹೆಂಗಸರು ಎರಡೂ ಕೈಗಳನ್ನು ಸಂಪೂರ್ಣವಾಗಿ (ಅಂದರೆ, ಅಂಗೈಯಿಂದ ಮೊಣಕೈ ವರೆಗೆ) ನೆಲಕ್ಕೆ ಊರಬೇಕು.

ಹೆಂಗಸರು ಸಿಜ್ದಾದಲ್ಲಿ ಇದ್ದಾಗ ಕೈಗಳು ತೊಡೆಗಳ ಬದಿಗೆ ಇರಬೇಕು; ಎದೆಯು ತೊಡೆಯ ಮೇಲ್ಭಾಗಕ್ಕೆ ಹತ್ತಿರಬೇಕು; ಪಾದಗಳ ಮೇಲ್ಮಗ್ಗಲುಗಳು ನೆಲಕ್ಕೆ ಹತ್ತಿರಬೇಕು; ಕುಂಡಿಗಳು ಹಿಂಬಡಗಳಿಗೆ ಹತ್ತಿರಬೇಕು.

(೪) ಕಾಯ್ದಾದಲ್ಲಿ, ಹೆಂಗಸರು ಎಡ-ತೊಡೆಯ ಆಧಾರದ ಮೇಲೆ ಕೂಡ್ರಬೇಕು. ಅದು ಹೇಗೆಂದರೆ, ಎಡದ ತೊಡೆಯನ್ನು ನೆಲಕ್ಕೆ ಹಾಸಿ, ಎಡಗಾಲವನ್ನು ಮಡಿಚಿ ಸ್ವಲ್ಪ ಅಡ್ಡಾಗಿ ಇಡಬೇಕು ಮತ್ತು ಬಲಗಾಲವನ್ನು ಮಡಿಚಿ ಎಡಗಾಲಿನ ಮೇಲೆ ಅಡ್ಡಾಗಿ ಇಡಬೇಕು.

(೫) ಹೆಂಗಸರು ನಮಾಜ ಮಾಡುವಾಗ ಎಲ್ಲ ತರದ ಪಠಣೆಗಳನ್ನು, ಎರಡನೇಯವರಿಗೆ ಕೇಳಿಸದಂತೆ ಬಾಯಲ್ಲಿಯೇ ಪಠಿಸಬೇಕು.

ಶಿಷ್ಯ:—ಗಂಡಸರ ಸಾಮೂಹಿಕ ಪ್ರಾರ್ಥನೆಯಲ್ಲಿ ಹೆಂಗಸರು ಭಾಗವಹಿಸಬಲ್ಲರೋ ?

ಗುರು:—ಅಹುದು. ಮಶೀದೆಗೆ ಹೋಗಿ ಗಂಡಸರ ಸಾಮೂಹಿಕ ಪ್ರಾರ್ಥನೆಯಲ್ಲಿ ಹೆಂಗಸರು ಭಾಗವಹಿಸಬಲ್ಲರು. ಆದರೆ, ಹೆಂಗಸರು ಗಂಡಸರ ಸಮೂಹದ ಹಿಂದೆ ನಿಲ್ಲಬೇಕು; ಗಂಡಸರ ಮಧ್ಯದಲ್ಲಿ ಅಥವಾ ಗಂಡಸರಕಿಂತ ಮುಂದೆ ನಿಲ್ಲಬಾರದು.

ಶಿಷ್ಯ:—ಸ್ತ್ರೀ ಪುರುಷರು ಭಾಗವಹಿಸಿದ ಸಾಮೂಹಿಕ ಪ್ರಾರ್ಥನೆಯ "ಇಮಾಮತ್"ವನ್ನು (ಮುಖಂಡತ್ವವನ್ನು) ಹೆಂಗಸು ವಹಿಸಬಲ್ಲಳೋ?

ಗುರು:—ಇಲ್ಲ, ವಹಿಸಲಾರಳು. ಆದರೆ, ಬರೀ ಹೆಂಗಸರ ಸಾಮೂಹಿಕ ಪ್ರಾರ್ಥನೆಯಲ್ಲಿ ಹೆಂಗಸು ಇಮಾಮತ್ ಮಾಡಬಲ್ಲಳು. ಹೆಂಗಸರ

ಸಾಮೂಹಿಕ ಪ್ರಾರ್ಥನೆಯಲ್ಲಿ ಇಮಾಮುಳಾದ ಹೆಂಗಸು, ಹೆಂಗಸರ ಸಾಲಿನ ಮಧ್ಯದಲ್ಲಿ ನಿಲ್ಲಬೇಕು; ಆದರೆ, ಸಾಲಿನ ಮುಂಭಾಗದಲ್ಲಿ ನಿಲ್ಲಬಾರದು.

ಶಿಷ್ಯ:—ಗಂಡಸರಂತೆ, ಎಲ್ಲ ನಮಾಜಗಳನ್ನೂ ಮಾಡಲೇಬೇಕೆಂಬ ಬಂಧನವು ಹೆಂಗಸರಿಗಾಗಿ ಸಹ ಇರುವದೇನು ?

ಗುರು:—ಅಹುದು. ಗಂಡಸರು ಮಾಡಲೇಬೇಕಾದ ನಮಾಜಗಳನ್ನು ಹೆಂಗಸರು ಸಹ ತಪ್ಪದಲೆ ನೇಮಿತವಾಗಿ ಮಾಡಲೇಬೇಕು; ಆದರೆ, "ನಮಾಜೆ-ಜುಮ್ಮಾ" "ನಮಾಜೆ-ಈದುಲ್‌ಫಿತ್ರ" ಮತ್ತು "ನಮಾಜೆ-ಈದುದ್ದುಹಾ" ಈ ಮೂರು ನಮಾಜಗಳನ್ನು ಮಾಡಲೇಬೇಕೆಂಬ ಬಂಧನವು ಹೆಂಗಸರಿಗಾಗಿ ಇರುವದಿಲ್ಲ.

ಶಿಷ್ಯ:—ಹೆಂಗಸರು ಕಡೆಗಾದಾಗ ಅಥವಾ ಪ್ರಸೂತಾನಂತರದ ರಕ್ತ ಸ್ರಾವವಿದ್ದಾಗ ಸಹ, ನಮಾಜವನ್ನು ಮಾಡಬೇಕೇನು ?

ಗುರು:—ಇಲ್ಲ, ಮಾಡಲೇಬಾರದು! ಈ ಎರಡು ಪ್ರಸಂಗಗಳಲ್ಲಿ ಹೆಂಗಸರಿಗೆ ನಮಾಜವು 'ಮಾಫ' ಇರುತ್ತದೆ, ಅರ್ಥಾತ್ ನಮಾಜದ ಬಂಧನವಿರುವದಿಲ್ಲ.

## —ರೋಗಿಗಳು ನಮಾಜ ಮಾಡುವ ಪದ್ಧತಿ—

ಶಿಷ್ಯ:—ಎರಡು ಪ್ರಸಂಗಗಳಲ್ಲಿ ಹೆಂಗಸರಿಗಾಗಿ ನಮಾಜವು ಮಾಫ್ ಇದ್ದಂತೆ, ಗಂಡಸರಿಗಾಗಿ ಸಹ ನಮಾಜವು ಮಾಫ್ ಇರುವಂಥ ಪ್ರಸಂಗ ಗಳು ಯಾವವಾದರೂ ಇರುತ್ತವೆಯೋ ?

ಗುರು:—ಇಲ್ಲ. ಎಂಥ ಪ್ರಸಂಗದಲ್ಲಿಯೂ ಗಂಡಸರಿಗಾಗಿ ನಮಾಜವು ಮಾಫ್ ಇರುವದಿಲ್ಲ.

ಶಿಷ್ಯ:—ಹಾಗಾದರೆ, ಬೇನೆ ಬಿದ್ದು ಬಹಳೇ ಅಶಕ್ತರಾದಾಗ, ಹೇಗೆ ನಮಾಜ ಮಾಡಬೇಕು ?

ಗುರು:—ಎದ್ದು ನಿಂತು ನಮಾಜವನ್ನು ಮಾಡುವದಾಗದಿದ್ದರೆ, ಕುಳಿತು ಮಾಡಬೇಕು. ಕೊಡ್ರಲು ಸಹ ಶಕ್ಯವಿಲ್ಲದಿದ್ದರೆ, ಮಲಗಿಕೊಂಡೇ ಸಂಜ್ಞೆಗಳಿಂದ ನಮಾಜ ಮಾಡಬೇಕು. ಮಲಗಿ ನಮಾಜ ಮಾಡುವದಾದರೆ,

ಕಾಬಾ ದಿಕ್ಕಿನೆಡೆ ಮುಖವಾಗುವಂತೆ ಬಲಮಗ್ಗುಲಿನ ಮೇಲೆ ಮಲಗಿಕೊಂಡು ಸಂಜ್ಞೆಗಳಿಂದ ನಮಾಜ ಮಾಡಬೇಕು. ಅಂತೂ, ಸ್ಮೃತಿಯ ಮೇಲೆ ಇರುವ ವರೆಗೆ, ರೋಗಿಯಾದವನು ಸಹ ನೇಮಿತವಾಗಿ ನಮಾಜಗಳನ್ನು ಅರ್ಪಿಸ ಬೇಕು.

## —(೩) ರೋಜಾ—

ಶಿಷ್ಯ:—'ರೋಜಾ' ಅಂದರೆ ಏನು ?

ಗುರು:—"ರೋಜಾ" ಈ ಶಬ್ದದ ಅರ್ಥವು 'ಉಪವಾಸ ವ್ರತ' ಎಂದಾಗುತ್ತದೆ; ಆದರೆ, ಇಸ್ಲಾಮ್ ಧರ್ಮದಲ್ಲಿ ಇದಕ್ಕೆ ಒಂದು ವಿಶಿಷ್ಟವಾದ ಅರ್ಥವಿರುತ್ತದೆ. ನೇಮಿತವಾದ ಧಾರ್ಮಿಕ ನೇಮಗಳಿಗೆ ಅನುಗುಣವಾಗಿ, ಪರಮಾತ್ಮನ ಕಟ್ಟಳೆಯನ್ನು ಪಾಲಿಸಬೇಕೆಂಬ ಉದ್ದೇಶದಿಂದ, ಯಾವದೇ ವಸ್ತುವನ್ನು—ಶರೀರ ಪೋಷಣೆಗೆ ಅದು ಸಾಧಕವೇ ಇರಲಿ ಅಥವಾ ಬಾಧಕವೇ ಇರಲಿ—ತಿನ್ನದಲೆ, ಕುಡಿಯದಲೆ, ಉಪಯೋಗಿಸದಲೆ, ಶರೀರವನ್ನು ಕೊರಗಿಸಿ ಆತ್ಮವನ್ನು ಶುದ್ಧೀಕರಿಸುವ ವಿಧಾನಕ್ಕೆ 'ರೋಜಾ' ಅನ್ನುತ್ತಾರೆ. ಪ್ರತಿ ಮುಸಲ್ಮಾನನು ಧಾರ್ಮಿಕವಾಗಿ ಮಾಡಲೇಬೇಕಾದ ಪಂಚ-ಕರ್ತವ್ಯಗಳಲ್ಲಿ ರೋಜಾ ಮೂರನೇಯದಾಗಿದೆ.

ಶಿಷ್ಯ:—ರೋಜಾ ಹೇಗೆ ಆಚರಿಸಬೇಕು ? ಮತ್ತು ಯಾವಾಗ ಆಚರಿಸಬೇಕು ?

ಗುರು:—ರಮ್ಜಾನ್ ತಿಂಗಳಲ್ಲಿ ಪ್ರತಿ ದಿವಸ ರೋಜಾ ಆಚರಿಸಬೇಕು. ಸೂರ್ಯೋದಯಕ್ಕಿಂತ ದೀಡು ತಾಸು (೧॥ ತಾಸು) ಮುಂಚಿತವಾಗಿ ಅಥವಾ ಅದಕ್ಕೂ ಪೂರ್ವದಲ್ಲಿ, ರೋಜಾದ ನಿಯ್ಯತ್ ಮಾಡಿ, ರೋಜಾ ಪ್ರಾರಂಭಿಸಬೇಕು; ಮತ್ತು ಸೂರ್ಯಾಸ್ತದ ನಂತರ ರೋಜಾದ ಪಾರಣಿ ಮಾಡಬೇಕು. ಒಮ್ಮೆ ರೋಜಾದ ನಿಯ್ಯತ್ ಮಾಡಿದ ನಂತರ ರೋಜಾವ್ರತವನ್ನು ಮುರಿಯಬಾರದು. ರೋಜಾದ ಅವಧಿಯಲ್ಲಿ ಯಾವದನ್ನೂ ತಿನ್ನಬಾರದು, ಕುಡಿಯಬಾರದು, ಸೇದಬಾರದು ಮತ್ತು ಉಗುಳು ಸಹ ನುಂಗಬಾರದು; ಯಾವದೇ ವಾಸನೆಯನ್ನು ಬೇಕೆಂತಲೇ ಮೂಸಿ

ನೋಡಬಾರದು; ಮತ್ತು ಕಾಮ ಸಂಭೋಗವನ್ನು ಮಾಡಬಾರದು. ಹೀಗೆ ಮಾಡುವದರಿಂದ, ರೋಜಾದ ವ್ರತವು ಮುರಿದು ಹೋಗುತ್ತದೆ. ಇದಲ್ಲದೆ, ರೋಜಾದ ಅವಧಿಯಲ್ಲಿ ದುಷ್ಟ ವಿಚಾರಗಳನ್ನು ಮತ್ತು ದುಷ್ಕೃತಿಗಳನ್ನು ಮಾಡಬಾರದು; ಹೇಯ ನುಡಿಗಳನ್ನು ಆಡಬಾರದು; ಯಾಕೆಂದರೆ, ಇವುಗಳಿಂದ ರೋಜಾ "ಮಕ್ರೂಹ್'' ಆಗುತ್ತದೆ, ಅಂದರೆ, ರೋಜಾದಿಂದ ಲಭ್ಯವಾಗತಕ್ಕ ಪುಣ್ಯೆಯು ಲಭ್ಯವಾಗುವದಿಲ್ಲ.

ಶಿಷ್ಯ:—ಅನಿವಾರ್ಯ ಕಾರಣಗಳ ಮೂಲಕ ಒಂದು ದಿವಸ ಅಥವಾ ಕೆಲವು ದಿನಗಳ ವರೆಗೆ ರೋಜಾ ಆಚರಿಸುವದು ಶಕ್ಯವಾಗದಿದ್ದರೆ, ಪಾಪ ತಟ್ಟುವದೇನು?

ಗುರು:—ಇಲ್ಲ. ಆದರೆ, ರಮ್ಜಾನ ತಿಂಗಳವು ಮುಗಿದ ನಂತರ, ರಮ್ಜಾನದಲ್ಲಿ ಅದೆಷ್ಟು ರೋಜಾಗಳು ತಪ್ಪಿರುತ್ತವೆಯೋ ಅಷ್ಟು ದಿನಗಳ ವರೆಗೆ ರೋಜಾ ಆಚರಿಸಬೇಕು. ರಮ್ಜಾನ ತಿಂಗಳಲ್ಲಿ ತಪ್ಪಿದ ರೋಜಾದ ಬದಲಾಗಿ, ನಂತರದಲ್ಲಿ ಆಚರಿಸುವ ರೋಜಾಕ್ಕೆ "ಕಜಾ-ರೋಜಾ'' ಅನ್ನುತ್ತಾರೆ.

ಶಿಷ್ಯ:—ವಿನಾಕಾರಣವಾಗಿ ರೋಜಾ ತಪ್ಪಿಸಿದರೆ ಪಾಪ ತಟ್ಟುವದೇ?

ಗುರು:—ಅಹುದು. ಸಕಾರಣಗಳಿಲ್ಲದೆ, ವಿನಾಕಾರಣವಾಗಿ ರೋಜಾ ವ್ರತವನ್ನು ಆಚರಿಸದಿದ್ದರೆ, ನಿಶ್ಚಯವಾಗಿಯೂ ಪಾಪ ತಟ್ಟುವದು.

ಶಿಷ್ಯ:—ರೋಜಾವ್ರತವನ್ನು ಆಚರಿಸುವಾಗ, ಗೊತ್ತಾಗದಲೆ ಅಕಸ್ಮಾತ್ತಾಗಿ ಏನಾದರನ್ನು ತಿನ್ನುವದರಿಂದ ಅಥವಾ ಕುಡಿಯುವದರಿಂದ, ರೋಜಾದ ವ್ರತವು ಮುರಿದು ಹೋದರೆ ಪಾಪ ತಟ್ಟುವದೋ ?

ಗುರು:—ಇಲ್ಲ; ಪಾಪತಟ್ಟುವದಿಲ್ಲ. ಆದರೆ, ಮುರಿದು ಹೋದಂಥ ರೋಜಾದ ಬದಲಾಗಿ, ರಮ್ಜಾನ ತಿಂಗಳವು ಮುಗಿದ ನಂತರ "ಕಜಾ-ರೋಜಾ'' ಆಚರಿಸಲಿಕ್ಕೇಬೇಕು.

ಶಿಷ್ಯ:—ರೋಜಾದ ವ್ರತವನ್ನು ಕೈಕೊಂಡು, ವಿನಾಕಾರಣವಾಗಿ ರೋಜಾವ್ರತವನ್ನು ಮುರಿದರೆ ಪಾಪ ತಟ್ಟುವದೋ?

ಗುರು:—ಅಹುದು, ಮಹಾಪಾಪ ತಟ್ಟುವದು; ಮತ್ತು ಆ ಪಾಪ ಪರಿಹಾರಕ್ಕಾಗಿ ಪ್ರಾಯಶ್ಚಿತ್ತವನ್ನು (ಕುಫ್ಫಾರಾ) ತೆತ್ತಬೇಕಾಗುವದು. ಒಂದು ದಿವಸದ ರೋಜಾ ಮುರಿದವದ್ದರ ಪ್ರಾಯಶ್ಚಿತ್ತಕ್ಕಾಗಿ, ರಮ್ಜಾನ ತಿಂಗಳವು ಮುಗಿದ ನಂತರ ಸತತಾಗಿ ಎರಡು ತಿಂಗಳುಗಳ ವರೆಗೆ ರೋಜಾ ಆಚರಿಸಬೇಕಾಗುವದು; ಮತ್ತು ಪ್ರಾಯಶ್ಚಿತ್ತದ ರೋಜಾ ಆಚರಿಸುವ ಸಮಯದಲ್ಲಿ ಒಂದಾದರೂ ರೋಜಾ ತಪ್ಪಿದರೆ, ಮತ್ತೆ ಪ್ರಾರಂಭದಿಂದ ಎರಡು ತಿಂಗಳುಗಳ ವರೆಗೆ ರೋಜಾ ಆಚರಿಸಬೇಕಾಗುವದು; ಆದರೆ, ಅಶಕ್ತತೆಯ ಅಥವಾ ರೋಗದ ಮೂಲಕವಾಗಿ ಪ್ರಾಯಶ್ಚಿತ್ತದ ರೋಜಾ ಆಚರಿಸುವಂಥ ಪರಿಸ್ಥಿತಿಯು ಇಲ್ಲದಾಗ ಮಾತ್ರ, ರೋಜಾ ಆಚರಿಸುವ ಬದಲಾಗಿ, ಅರವತ್ತು ಜನ ದೀನ ದರಿದ್ರರಿಗೆ—ಪ್ರತಿಯೊಬ್ಬರಿಗೆ ೨ಶೇರು ಗೋದಿ ಅಥವಾ ನಾಲ್ಕು ಶೇರು ಜೋಳದ ಪ್ರಮಾಣದಂತೆ—ಅನ್ನದಾನವನ್ನು ನೀಡಬೇಕು.

ಶಿಷ್ಯ:—ರೋಜಾವ್ರತವನ್ನು ಆಚರಿಸುವ ಸಮಯದಲ್ಲಿ, ರೋಜಾದ ವ್ರತವನ್ನು ಮುರಿಯಲೇಬೇಕಾದಂಥ ಅನಿವಾರ್ಯ ಪ್ರಸಂಗವು ಬಂದದ್ದಾದರೆ, ಏನು ಮಾಡಬೇಕು ?

ಗುರು:—ಒಮ್ಮೆ ರೋಜಾದ ವ್ರತವನ್ನು ಕೈಕೊಂಡ ನಂತರ, ಪಾರಣಿಯ ಸಮಯದ ವರೆಗೆ ರೋಜಾ ಮುರಿಯಲೇಬಾರದು; ಆದರೆ, ಕೆಳಗಿನ ಎರಡು ಕಾರಣಗಳಿಗಾಗಿ ರೋಜಾವ್ರತವನ್ನು ಮುರಿದರೆ ಪಾಪ ತಟ್ಟುವದಿಲ್ಲ; ಆದರೆ, ಹೀಗೆ ಅನಿವಾರ್ಯವಾಗಿ ಮುರಿದಂಥ ರೋಜಾದ ಬದಲಾಗಿ, ಕಜಾ-ರೋಜಾ ಆಚರಿಸಬೇಕಾಗುವದು. ಆ ಎರಡು ಕಾರಣಗಳು ಯಾವವೆಂದರೆ—

(೧) ಪಾರಣಿಯ ವೇಳೆಯ ವರೆಗೆ ತಡೆಯಲು ಶಕ್ಯವಾಗಲಾರದಷ್ಟು ನೀರಡಿಕೆಯಾದರೆ.

(೨) ಜುಲಾಬ, ವಾಂತಿ, ಹೊಟ್ಟೆಕಡಿತ ಮೊದಲಾದ ರೋಗಗಳಿಂದ ಜೀವಕ್ಕೆ ತೀವ್ರತರ ಗಂಡಾಂತರವಿದ್ದರೆ, ಅಥವಾ ತಾಳಲಾರದಷ್ಟು ವೇದನೆ ಇದ್ದರೆ.

ಶಿಷ್ಯ:—ಸ್ತ್ರೀ ಪುರುಷರೆಲ್ಲರೂ ರೋಜಾ ಆಚರಿಸಲೇಬೇಕೆಂದು ಹೇಳಿದಿರಿ; ಆದರೆ, ರೋಗಿಗಳಿಗಾಗಿ ಮತ್ತು ಪ್ರವಾಸಿಕರಿಗಾಗಿ ರೋಜಾ ಆಚರಿಸುವದು ಶಕ್ಯವಾಗದಿದ್ದರೆ, ಏನು ಮಾಡಬೇಕು?

ಗುರು:—ರೋಗಿಗಳಿಗಾಗಿ ಮತ್ತು ಪ್ರವಾಸಿಕರಿಗಾಗಿ, ರೋಜಾವ್ರತವನ್ನು ಆಚರಿಸಲೇಬೇಕೆಂಬ ಬಂಧನವಿರುವದಿಲ್ಲ; ಆದರೆ, ರೋಗನಿವಾರಣೆಯ ನಂತರ ಅಥವಾ ಪ್ರವಾಸವು ಮುಗಿದ ನಂತರ, ತಪ್ಪಿಹೋದಂಥ ರೋಜಾಗಳ ಬದಲಾಗಿ ಕಜಾ-ರೋಜಾ ಆಚರಿಸಲೇಬೇಕಾಗುವದು. ಇದೇ ರೀತಿಯಾಗಿ, ಹೆಂಗಸರು ಕಡೆಗಾದಾಗ, ಅಥವಾ ಪ್ರಸೂತರಾದಾಗ, ಅಥವಾ ಹಾಲುಣ್ಣಿಸುವ ಅವಧಿಯಲ್ಲಿ ರೋಜಾದ ವ್ರತದಿಂದ ಕೂಸಿಗೆ ಸಾಕಷ್ಟು ಹಾಲವು ದೊರೆಯದೆ ಅದು ಅಶಕ್ತವಾದೀತೆಂಬ ಭೀತಿಯಿದ್ದಾಗ, ರೋಜಾದ ಬಂಧನವು ಹೆಂಗಸರಿಗಾಗಿ ಇರುವದಿಲ್ಲ; ಆದರೆ, ಪ್ರತಿಬಂಧಕ ಕಾರಣಗಳು ದೂರಾದ ನಂತರ, ಕಜಾ-ರೋಜಾಗಳನ್ನು ಅವರು ಆಚರಿಸಲೇಬೇಕು.

## —ಫಿತ್ರಾ—

ಶಿಷ್ಯ:—"ಫಿತ್ರಾ" ಅಂದರೆ ಏನು?

ಗುರು:—"ಸದ್ಕಯೇ-ಫಿತ್ರಾ" ಎಂಬುವದನ್ನು ಸಂಕ್ಷಿಪ್ತಿಸಿ ರೂಢಿಯಲ್ಲಿ 'ಫಿತ್ರಾ' ಅನ್ನುತ್ತಾರೆ. 'ಸದ್ಕಾ' ಅಂದರೆ "ಅನ್ನದಾನ". ಮನೆತನದ ಆರ್ಥಿಕ ಪರಿಸ್ಥಿತಿ ಚನ್ನಾಗಿದ್ದವನು (ಅಂದರೆ, ಇತರರ ಹಂಗಿನೊಳಗಿರದೆ ಉಂಡು ತಿಂದು ಸುಖವಾಗಿದ್ದವನು), ಗೊತ್ತುಮಾಡಲ್ಪಟ್ಟ ಪ್ರಮಾಣಕ್ಕೆ ಅನುಗುಣವಾಗಿ, ದೀನ ದರಿದ್ರರಿಗೆ ಅನ್ನದಾನವನ್ನು ನೀಡುವದಕ್ಕೆ "ಸದ್ಕಯೆ-ಫಿತ್ರಾ" ಅನ್ನುತ್ತಾರೆ. ಫಿತ್ರಾ ಕೊಡಲು ಅರ್ಹನಾದವನು, ತನ್ನ ಪತಿಯಿಂದಲೂ ಮತ್ತು ತನ್ನ ಮೇಲೆ ಅವಲಂಬಿತರಾದ ಕುಟುಂಬದ ಜನರ ಮತ್ತು ನೋಕರರ ಪತಿಯಿಂದಲೂ—ಪ್ರತಿಯೊಬ್ಬರ ಪತಿಯಿಂದ ಎರಡು ಶೇರು ಗೋದಿ ಅಥವಾ ನಾಲ್ಕು ಶೇರು ಜೋಳದ ಪ್ರಮಾಣದಂತೆ—ದೀನ ದರಿದ್ರರಿಗೆ ಅನ್ನದಾನವನ್ನು ಕೊಡಬೇಕೆಂದು ಇಸ್ಲಾಮ್ ಧರ್ಮದ ಆದೇಶವಿರುತ್ತದೆ. ವರ್ಷದಲ್ಲಿ ಒಮ್ಮೆ, ತಮಗೆ ಶಕ್ಯವಾದಾಗ, ಫಿತ್ರಾ ಕೊಡಲೇ

ಬೇಕು; ಆದರೆ ರಮ್ಜಾನ್ ಹಬ್ಬದ ದಿವಸ, ನಮಾಜಕ್ಕಾಗಿ ಈದಗಾಹಕ್ಕೆ ಹೋಗುವ ಪೂರ್ವದಲ್ಲಿಯೇ, ಫಿತ್ರಾ ಕೊಡುವದು ಹೆಚ್ಚು ಶ್ರೇಯಸ್ಕರ ವಾಗಿದೆ.

## —(೪) ಜಕಾತ್—

ಶಿಷ್ಯ:—'ಜಕಾತ್' ಅಂದರೆ ಏನು?

ಗುರು:—'ಜಕಾತ್' ಈ ಶಬ್ದದ ಅರ್ಥವು 'ಕರ', 'ಸುಂಕ' 'ಟ್ಯಾಕ್ಷ' ಅಂತಾ ಆಗುತ್ತದೆ; ಆದರೆ, ಇಸ್ಲಾಮ್ ಧರ್ಮದಲ್ಲಿ ಈ ಶಬ್ದಕ್ಕೆ ಒಂದು ವಿಶಿಷ್ಟವಾದ ಅರ್ಥವಿರುತ್ತದೆ. ತನ್ನ ಮೇಲೆ ಅವಲಂಬಿತರಾದ ಕುಟುಂಬದವರ ಮತ್ತು ತನ್ನ ಪ್ರತಿನಿತ್ಯದ ಉಪಯೋಗಕ್ಕಾಗಿ ಅವಶ್ಯವಿರುವಷ್ಟವುಗಳನ್ನು ಹೊರಪಡಿಸಿ, ಉಳಿದ ಸ್ಥಾವರ ಮತ್ತು ಜಂಗಮ ಆಸ್ತಿಯ ಒಟ್ಟು ಬೆಲೆಯ ನಾಲ್ವತ್ತನೇ ಭಾಗವನ್ನು, ದೀನದರಿದ್ರರ ಕಲ್ಯಾಣಕ್ಕಾಗಿ ವಿನಿಯೋಗಿಸುವದಕ್ಕೆ 'ಜಕಾತ್' ಅನ್ನುತ್ತಾರೆ. ಶ್ರೀಮಂತನಾದ ಪ್ರತಿ ಪ್ರೌಢ ಮುಸ್ಲಿಮನು ಅಥವಾ ಮುಸ್ಲಿಮಳು, ಅಥವಾ ಶ್ರೀಮಂತನಾದ ಬಾಲಕನ ಆಸ್ತಿಯ ವ್ಯವಸ್ಥಾಪಕನು, ವರ್ಷಕ್ಕೊಮ್ಮೆ ಜಕಾತ್ ಕೊಡಲೇಬೇಕೆಂದು ಇಸ್ಲಾಮ್ ಧರ್ಮದ ಆದೇಶವಿದೆ. ಇಸ್ಲಾಮ್ ಧರ್ಮದ ಐದು ಫರ್ಜಗಳಲ್ಲಿ, ಜಕಾತವು ನಾಲ್ಕನೇಯದ್ದಾಗಿದೆ. ಜಕಾತ್ ಕೊಡಲು ಅರ್ಹರಾದಂಥವರು ಜಕಾತ್ ಕೊಡದಿದ್ದರೆ, ಇಸ್ಲಾಮ್ ಧರ್ಮದ ಆದೇಶವನ್ನು ಧಿಃಕರಿಸಿದ ಪಾಪಕ್ಕೆ ಗುರಿಯಾಗುವರು. ವರ್ಷದಲ್ಲಿ ತಮಗೆ ಅನುಕೂಲವಾದಾಗೊಮ್ಮೆ ಜಕಾತ್ ಕೊಡಬೇಕು; ಆದರೆ ರಮ್ಜಾನ ತಿಂಗಳಲ್ಲಿ ಕೊಡುವದು ಹೆಚ್ಚು ಶ್ರೇಯಸ್ಕರವಾಗಿದೆ.

ಶಿಷ್ಯ:—ಕನಿಷ್ಟ ಪಕ್ಷಕ್ಕೆ ಎಷ್ಟು ಆಸ್ತಿಯಿದ್ದರೆ, ಅಥವಾ ಎಷ್ಟು ಸಂಪತ್ತು ಇದ್ದರೆ ಜಕಾತ್ ಕೊಡುವದು ಬಂಧನಕಾರಿಯಾಗುವದು? ಮತ್ತು ಜಕಾತ ಕೊಡಬೇಕಾದ ಲೆಕ್ಕವನ್ನು ಹೇಗೆ ನಿರ್ಧರಿಸಬೇಕು ?

ಗುರು:—ಜಕಾತದ ರಕಮುವನ್ನು ನಿರ್ಧರಿಸುವಾಗ ಕೆಳಗಿನ ಆಸ್ತಿಗಳನ್ನು ಅಥವಾ ವಸ್ತುಗಳನ್ನು ಲೆಕ್ಕದಲ್ಲಿ ಹಿಡಿಯಬಾರದು:—

(೧) ಸ್ವಂತದ ಉಪಯೋಗಕ್ಕಾಗಿ ಇದ್ದ ಮನೆಯನ್ನು ಅಥವಾ ಮನೆಗಳನ್ನು.

(೨) ಸ್ವಂತದ ವ್ಯವಹಾರಕ್ಕಾಗಿ ಇದ್ದ ಅಂಗಡಿಯನ್ನು ಅಥವಾ ಅಂಗಡಿಗಳನ್ನು

(೩) ಸ್ವಂತದ ಉಪಯೋಗಕ್ಕಾಗಿ ಅಥವಾ ಸ್ವಂತದ ಬೇಸಾಯಕ್ಕಾಗಿ ಸಾಕಿದ ದನಕರಗಳನ್ನು ಅಥವಾ ವಾಹನಗಳನ್ನು, ಮತ್ತು ಅವುಗಳನ್ನು ಇಡಲು ಉಪಯೋಗಿಸುವ ಮನೆಗಳನ್ನು

(೪) ಸ್ವಂತದ ಉಪಯೋಗಕ್ಕಾಗಿ ಅಥವಾ ವ್ಯಾಪಾರಕ್ಕಾಗಿ ಉಪಯೋಗಿಸುವ ಸಾಧನಸಾಮುಗ್ರಿಗಳನ್ನು, ಅಂದರೆ, ಚಕ್ಕಡಿ, ಕುಂಟಿ, ರಂಟೆ, ತಕ್ಕಡಿ, ಕಪಾಟ, ಟ್ರೇಜರಿ ಮುಂತಾದವುಗಳನ್ನು

(೫) ಸ್ವಂತದ ಉಪಯೋಗಕ್ಕಾಗಿ ಇರುವ ಅವಶ್ಯಕ ವಸ್ತುಗಳನ್ನು, ಅಂದರೆ, ಪಾತ್ರೆಗಳು, ಬಟ್ಟೆಗಳು, ಬೆಳ್ಳಿ ಬಂಗಾರದ ವಸ್ತುಗಳು, ಖುರ್ಚಿ, ಟೇಬಲ್, ಪಲ್ಲಂಗ, ಗಡಿಯಾರ ಮೊದಲಾದವುಗಳನ್ನು.

(೬) ವಸೂಲಿ ಆಗದಂಥ ಉದ್ರಿ ರಕಮನ್ನು; ಮತ್ತು ಪರತ್ ಬಾರದಂಥ ಸಾಲವನ್ನು.

(೭) ಯಾವದೇ ವಸ್ತು ಅಥವಾ ಆಸ್ತಿಯು ತನ್ನ ಒಡೆತನದಲ್ಲಿ ಬಂದು ಇನ್ನೂ ಒಂದು ವರ್ಷವು ಗತಿಸಿರದಿದ್ದರೆ, ಅಂಥ ಆಸ್ತಿಯನ್ನು.

ಮೇಲಿನ ಆಸ್ತಿಗಳ ಮತ್ತು ವಸ್ತುಗಳ ಹೊರ್ತಾಗಿ, ಉಳಿದೆಲ್ಲ ಸ್ಥಾವರ ಜಂಗಮ ಆಸ್ತಿಯ ಬೆಲೆಯನ್ನು ಕಟ್ಟಿ, ಈ ಒಟ್ಟು ಬೆಲೆಯಲ್ಲಿ ಕೆಳಗಿನವುಗಳನ್ನು ವಜಾ ಮಾಡಬೇಕು—

(೧) ಯಾರಿಗಾದರೂ ಸಾಲ ಕೊಡುವದಿದ್ದರೆ ಆ ಸಾಲದ ರಕಮನ್ನು

(೨) ಯಾವದೇ ವ್ಯವಹಾರದಲ್ಲಿ ಇಂತಿಷ್ಟು ಹಾನಿಯಾಗಬಹುದೆಂದು ಖಚಿತವಿದ್ದರೆ, ಆಗಬಹುದಾದ ಹಾನಿಯ ರಕಮುವನ್ನು

ಮೇಲಿನ ಪದ್ಧತಿಯಂತೆ ಪ್ರಾಮಾಣಿಕತನದಿಂದ ಲೆಕ್ಕಮಾಡಿ ನಿರ್ಧರಿಸಿದಂಥ ಒಟ್ಟು ರಕಮವು, ೫೨॥ ತೊಲಿ ಬೆಳ್ಳಿಯ ಬೆಲೆಯಷ್ಟು ಅಥವಾ

ಅವಕ್ಕಿಂತ ಹೆಚ್ಚಾದರೆ, ಅಂಥ ರಕಮಿನ ಮೇಲೆ ಜಕಾತದ ಆಕರಣೆಯಾಗುವದು, ಅರ್ಥಾತ್ ಅಷ್ಟು ಸಂಪತ್ತು ಇದ್ದವರಿಗೆ ಜಕಾತವು ಬಂಧನಕಾರಿಯಾಗುವದು.

[ಜಕಾತದ "ನಿಸಾಬ್"ವನ್ನು ನಿರ್ಧರಿಸುವ ಪದ್ಧತಿಯನ್ನು ಅತಿ ಸಂಕ್ಷಿಪ್ತವಾಗಿ ಮೇಲೆ ವಿವರಿಸಲಾಗಿದೆ. ಸವಿಸ್ತಾರ ಮಾಹಿತಿಗಾಗಿ ದೊಡ್ಡ ಗ್ರಂಥಗಳನ್ನು ನೋಡಿಕೊಳ್ಳಬೇಕು.-ಲೇಖಕ]

ಶಿಷ್ಯ:— ಜಕಾತದ ಹಣವನ್ನು ಹೇಗೆ ವಿನಿಯೋಗಿಸಬೇಕು ?

ಗುರು:— ದೀನ ದರಿದ್ರರ ಕಲ್ಯಾಣಕ್ಕಾಗಿ ವಿನಿಯೋಗಿಸಬೇಕು. ಅಂದರೆ, ಅಸಹಾಯಕರಾದ ವಿಧವೆಯರಿಗೆ, ಅನಾಥರಾದ ಮಕ್ಕಳಿಗೆ, ಸಹಾಕರಿಲ್ಲದ ವೃದ್ಧರಿಗೆ, ದುಡಿಯಲು ಬಾರದಂಥ ಅಂಗಹೀನರಾದ ಬಿಕ್ಷುಕರು ಮೊದಲಾದವರಿಗೆ ಅನ್ನ ಬಟ್ಟೆಗಳನ್ನು ಕೊಡಬೇಕು; ಅನಾಥರೂ ಬಡವರೂ ಆದ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಸಹಾಯವನ್ನು ಸಲ್ಲಿಸಬೇಕು; ಅನಾಥ ಬಾಲಿಕೆಯರ ಲಗ್ನಗಳಿಗಾಗಿ ಸಹಾಯವನ್ನು ನೀಡಬೇಕು. ಅಲ್ಲದೆ, ಉಚಿತ ವಿದ್ಯಾಭ್ಯಾಸ ನೀಡುವ ಸಂಸ್ಥೆಗಳಿಗೆ, ಮತ್ತು ಧರ್ಮ ಪ್ರಸಾರಕ್ಕಾಗಿ ಜಕಾತದ ಹಣವನ್ನು ವಿನಿಯೋಗಿಸಬೇಕು.

ಸಹಾಯವನ್ನು ಪಡೆಯಲು ಅರ್ಹರಾದಂಥವರು ತಮ್ಮ ಆಪ್ತ ಮಿತ್ರರಲ್ಲಿ ಯಾರಾದರೂ ಇದ್ದರೆ, ಮೊದಲು ಅವರಿಗೆ ಸಹಾಯವನ್ನು ನೀಡಬೇಕು; ಆ ಮೇಲೆ ಓಣಿಯವರಿಗೆ; ಆ ನಂತರ ಊರವರಿಗೆ, ತದನಂತರ ಪರಊರವರಿಗೆ ಸಹಾಯವನ್ನು ಸಲ್ಲಿಸಬೇಕು. ಆದರೆ, ಜಕಾತದ ಹಣವನ್ನು ಕೆಳಗಿನವರಿಗಾಗಿ ಕೊಡಬಾರದು :—

(೧) ತಾಯಿ ತಂದಿಗಳಿಗೆ ಮತ್ತು ಅಜ್ಜಂದರಿಗೆ (ಅಂದರೆ, ತಾಯಿಯ ಅಥವಾ ತಂದೆಯ ತಾಯಿ-ತಂದೆಗಳಿಗೆ)

(೨) ಗಂಡನಿಗೆ, ಹೆಂಡತಿಗೆ

(೩) ಒಡಹುಟ್ಟಿದ ಮಕ್ಕಳಿಗೆ ಮತ್ತು ಮೊಮ್ಮಕ್ಕಳಿಗೆ (ಅಂದರೆ, ಮಗನ ಅಥವಾ ಮಗಳ ಮಕ್ಕಳಿಗೆ)

(೪) ಪೈಗಂಬರರ ವಂಶಜರಿಗೆ, ಅಂದರೆ ಸಯ್ಯದರಿಗೆ.

ಮೇಲೆ ಹೇಳಿದಂಥವರಿಗೆ ಜಕಾತದ ಹಣದೊಳಗಿಂದ ಸಹಾಯ ವಗೈರೆ ನೀಡಬಾರದು. ಇಂಥವರಿಗೆ ಏನಾದರೂ ಸಹಾಯ ಮಾಡುವದಾದರೆ, ಜಕಾದದ ಹಣದ ಹೊರ್ತಾಗಿ, ತಮ್ಮಲ್ಲಿರುವ ಇತರ ಹಣದೊಳಗಿಂದ ಸಹಾಯವನ್ನು ಸಲ್ಲಿಸಬೇಕು. ಇದೇ ರೀತಿಯಾಗಿ, ಮಸೀದೆಗಳಿಗಾಗಿ ಮತ್ತು ಸತ್ಪುರುಷರ ದರಗಾಹಗಳಿಗಾಗಿ ಜಕಾತದ ಹಣದೊಳಗಿಂದ ವರ್ಗಣಿ ವಗೈರೆ ಕೊಡಬಾರದು; ಮತ್ತು ಮೈಯತ್‌ದ (ಮೃತದೇಹದ) ಕಫನ್-ದಫನ್‌ದ ಸಲುವಾಗಿ (ಅಂತ್ಯ ಸಂಸ್ಕಾರದ ಸಲುವಾಗಿ) ಜಕಾತದ ಹಣವನ್ನು ಕೊಡಬಾರದು.

—X—

## — (೫) ಹಜ್ —

ಶಿಷ್ಯ:— "ಹಜ" ಅಂದರೆ ಏನು ?

ಗುರು:— ಮಕ್ಕಾ ಪಟ್ಟಣದಲ್ಲಿರುವ ಪವಿತ್ರ ಕಾಬಾ ಮಂದಿರವನ್ನು ಮತ್ತು ಅಲ್ಲಿರುವ ಇತರ ಪವಿತ್ರ ಸ್ಥಳಗಳನ್ನು ಸಂದರ್ಶಿಸಿ, ಧಾರ್ಮಿಕ ನೇಮಗಳಿಗೆ ಅನುಗುಣವಾಗಿ ವಿಧಿಗಳನ್ನು ನೆರವೇರಿಸುವದಕ್ಕೆ "ಹಜ್" ಅನ್ನುತ್ತಾರೆ. ಆರ್ಥಿಕ ಪರಿಸ್ಥಿತಿಯು ಚನ್ನಾಗಿದ್ದ ಮುಸಲ್ಮಾನನು (ಅಂದರೆ, ತನ್ನ ಮೇಲೆ ಅವಲಂಬಿತ ಕುಟುಂಬದವರಿಗೆ ಅನಾನುಕೂಲವಾಗದಂತೆ ಮಕ್ಕಾ ಪಟ್ಟಣಕ್ಕೆಹೋಗಿ, ಹಜ್‌ಯಾತ್ರೆಯನ್ನು ತೀರಿಸಿಕೊಂಡು ಮರಳಿ ಬರುವಷ್ಟು ಆರ್ಥಿಕ ಪರಿಸ್ಥಿತಿ ಚೆನ್ನಾಗಿದ್ದವನು) ತನ್ನ ಜೀವಮಾನದಲ್ಲಿ ಒಮ್ಮೆಯಾದರೂ ಹಜ್ ಮಾಡಲೇಬೇಕೆಂದು ಇಸ್ಲಾಮ್ ಧರ್ಮದ ಆದೇಶವಿದೆ. ಇಸ್ಲಾಮ್ ಧರ್ಮದ ಪಂಚ-ಫರ್ಜಗಳಲ್ಲಿ, ಹಜ್ಜವು ಐದನೇಯದ್ದಾಗಿದೆ.

—X—

# -:೩ ನೇ ಭಾಗ:-

## —:ಮುಸಲ್ಮಾನರ ಇತರ ಧಾರ್ಮಿಕ ವಿಧಿಗಳು:—

### (೧) ಫಾತಿಹಾ

ಶಿಷ್ಯ:— "ಫಾತಿಹಾ" ಅಂದರೆ ಏನು ?

ಗುರು:— ಮೃತವಾದ ಯಾವದೇ ವ್ಯಕ್ತಿಯ ಆತ್ಮಕ್ಕೆ ಅಥವಾ ವ್ಯಕ್ತಿಗಳ ಆತ್ಮಗಳಿಗೆ ಸುಖ ಶಾಂತಿಗಳನ್ನು ಒದಗಿಸಬೇಕೆಂದೂ, ದಯದೋರಬೇಕೆಂದೂ ಮತ್ತು ಅವರ ತಪ್ಪುಗಳನ್ನು ಕ್ಷಮಿಸಬೇಕೆಂದೂ ಪರಮಾತ್ಮನನ್ನು ಬೇಡಿಕೊಳ್ಳುವದಕ್ಕೆ, ಅಥವಾ ಯಾವದಾದರೊಂದು ಕಾರ್ಯವನ್ನು ಪ್ರಾರಂಭಿಸುವಾಗ ಆ ಕಾರ್ಯದ ಸಫಲತೆಗಾಗಿ ಪರಮಾತ್ಮನನ್ನು ಬೇಡಿಕೊಳ್ಳುವದಕ್ಕೆ "ಫಾತಿಹಾ" ಅನ್ನುತ್ತಾರೆ. ಗೋರಿಗಳಿಗೆ ಅಥವಾ ಸತ್ಪುರುಷರ ದರಗಾಹಗಳಿಗೆ ಭೆಟ್ಟಿ ಕೊಟ್ಟಾಗ, ಮತ್ತು ಯಾವದೇ ಸತ್ಕಾರ್ಯವನ್ನು ಪ್ರಾರಂಭಿಸುವ ಸಂದರ್ಭದಲ್ಲಿ "ಫಾತಿಹಾ" ಪಠಿಸುತ್ತಾರೆ. ಫಾತಿಹಾ ಪಠಿಸುವ ಪದ್ಧತಿಯು ಹೀಗೆ ಇರುತ್ತದೆ.:—

(೧) ಮೃತರ ಆತ್ಮಕ್ಕಾಗಿ ಫಾತಿಹಾ ಪಠಿಸುವ ಪದ್ಧತಿ:—

(ಅ) ಮೊದಲು ಫಾತಿಹಾದ ಮುನ್ನುಡಿಯನ್ನು ಪಠಿಸಬೇಕು. ಫಾತಿಹಾದ ಮುನ್ನುಡಿಯು ಇಂತಿರುತ್ತದೆ:—

"ಬಿಸ್ಮಿಲ್ಲಾ ಹಿರ್‍ರಹಿಮಾ ನಿರ್‍ರಹೀಮ್—ಬಾ ಅರ್ವಾಹಿ ರಸೂಲುಲ್ಲಾಹಿ ವ ಔಲಾದಿ ರಸೂಲುಲ್ಲಾಹಿ, ವ ಜುರ್ರಿಯಾತಿ ರಸೂಲುಲ್ಲಾಹಿ ವ ಅಹ್ಲಿ ಬೈತಿ ರಸೂಲುಲ್ಲಾಹಿ, ವಲ್ ಮುಜಾಹಿದನಾ ಫೀ ಸಬೀಹ್ ಲಿಲ್ಲಾಹಿ ವಲ್ ಅಂಬಿಯಾಯಿ ವಲ್ ಔಲಿಯಾಯಿ, ವಲ್ ಅತ್ಕಿಯಾಯಿ ವಲ್ ಉಲ್ಮಾಯಿ, ವಷ್ಷಹದಾಯಿ ವಸ್ಸಾಬಲಿಹೀನ್; ಖುಸೂಸನ್ ಬರೂಹೆ ಹಜರತ್ ಖ್ವಾಜಾ ಆಲಮ್ ರಿಸಾಲತ್ ಫನಾಹ್ ಅಹ್ಮದ ಮುಜ್ತಬಾ ಮುಹಮ್ಮದ ಮುಸ್ತಫಾ ಸೊಲ್ಲಲ್ಲಾಹು ಅಲೈಹಿ ವ ಸೊಲ್ಲಮ್+ವಲ್ ಅರ್ವಾಹಿ ಗೌಸುಸ್ಸಮ್ದಾನಿ ಕುತುಬಿ ರಬ್ಬಾನಿ ಮಹ್ಬೂಬಿ ಹರ್‌ದೋಜಹಾನಿ ಖ್ವಾಜಾ ಮುಹೀಯುದ್ದೀನಿ ಶೇಖ ಸಯ್ಯದಿನಾ ಅಬ್ದುಲ್ ಖಾದಿರ್ ಜೀಲಾನಿ, ಕದ್ದಸಲ್ಲಾಹು ಸಿರ್ರಹುಲ್ ಅಜೀಜ, ಹಜರತ್ ಇಮಾಮುಹಸನ್, ವ ಇಮಾಮು ಹುಸೈನ್, ಷಹೀದಾನೆ ದಸ್ತೆ ಕರ್ಬಲಾ, ಫಾತಿಮುತಿಜ್ಜೊಹರಾ, ಬೀಬಿ ಖತೀಜ ತುಲ್ ಕುಬ್ರಾ; ಹಜರತ್ ಆದಮ್ ತಾ ಯೀಸಾ ಜುಮಾಕುಲ್ಲಿ ಕಾಫಿನ್ ಅಹ್ಲಿಲ್ ಇಸ್ಲಾಮ್ ಷೈಯಿನ್ ಲಿಲ್ಲಾಹಿ ಆಲ್ ಫಾತಿಹಾ."

(ಬ) ನಂತರ ಸೂರೆ ಫಾತಿಹಾ ಒಂದು ಸಾರೆ ಪಠಿಸಬೇಕು.

(ಕ) ನಂತರ ಸೂರೆ ಅಖ್ಲಾಸ್ ಮೂರು ಸಾರೆ ಪಠಿಸಬೇಕು.

(ಡ) ನಂತರ ಹೀಗೆ ಪಠಿಸಬೇಕು.:-

"ವಾಕಾನ ಮುಹಮ್ಮದುನ್ ಅಬಾ ಅಹದಿಮ್ಮಿರ್ರಿಜಾಲಿಕುಮ್, ವಲಾಕಿರ್ರಸೂಲುಲ್ಲಾಹಿ ವ ಖಾತಮುನ್ ನಬೀಯ್ಯೀನ್; ವಕಾನಲ್ಲಾಹು ಬಿಕುಲ್ಲಿ ಷೈಯಿನ್ ಆಲೀಮ. ಇನ್ನಲ್ಲಾಹಾ ವ ಮಲಾಯಿಕತುಹೂ ಯುಸೊಲ್ಲೂನ ಅಲನ್ನಬಿ, ಯಾ ಅಯ್ಯುಹಲ್ಲಜೀನ ಆಮನೂ, ಸೊಲ್ಲೂ ಅಲೈಹಿ ವ ಸೊಲ್ಲಿಮೂ ತಸ್ಲೀಮಾ. ಅಲ್ಲಾಹುಮ್ಮಾ, ಸೊಲ್ಲಿ ಅಲಾ ಸಯ್ಯದಿನಾ ಮುಹಮ್ಮದಿಂವ್, ವ ಆಲಾ ಆಲಿ ಸಯ್ಯದಿನಾ ಮುಹಮ್ಮದಿಂವ್, ವ ಬಾರಕ ವ ಸೊಲ್ಲಮ್"

(ಇ) ನಂತರ ಪರಮಾತ್ಮನಲ್ಲಿ ಬೇಡಿಕೊಳ್ಳುವದನ್ನು ಬೇಡಿಕೊಳ್ಳಬೇಕು.

(ಫ) ನಂತರ ಹೀಗೆ ಪಠಿಸಬೇಕು:—

ಸುಬ್ಹಾನ ರಬ್ಬಿಕ ರಬ್ಬಿಲ್ ಇಜ್ಜತಿ ಅಮ್ಮಾ ಯಸಿಫೂನ್, ವ ಸಲಾಮುನ್ ಅಲಲ್ ಮುರ್ಸಲೀನ್, ವಲ್ ಹಮ್ದು ಲಿಲ್ಲಾಹಿ ರಬ್ಬಿಲ್ ಆಲಮೀನ್"

(೨) ಯಾವದೇ ಕಾರ್ಯದ ಸಫಲತೆಗಾಗಿ ಪಠಿಸುವ ಫಾತಿಹಾ:—

(ಅ) "ಅಲ್ ಫಾತಿಹಾ" ಅಂತಾ ಅಂದ ನಂತರ, ಸೂರೆ ಫಾತಿಹಾ ಒಂದು ಸಾರೆ ಪಠಿಸಬೇಕು.

(ಬ) ನಂತರ ಸೂರೆ ನಸ್ರ ಒಂದುಸಾರೆ ಪಠಿಸಬೇಕು.

(ಕ) ನಂತರ ದರೂದೆ ಷರೀಫ್ ಒಂದುಸಾರೆ ಪಠಿಸಬೇಕು.

(ಡ) ನಂತರ ಪರಮಾತ್ಮನಲ್ಲಿ ಬೇಡಿಕೊಳ್ಳುವದನ್ನು ಬೇಡಿಕೊಳ್ಳಬೇಕು.

(ಇ) ನಂತರ ಹೀಗೆ ಪಠಿಸಬೇಕು.:—

"ಇನ್ನಲ್ಲಾಹಾ ವ ಮಲಾಯಿಕತುಹು ಯುಸೊಲ್ಲೂನ ಅಲನ್ನಬಿ, ಯಾ ಅಯ್ಯುಹಲ್ಲಜೀನ ಆಮನೂ, ಸೊಲ್ಲೂ ಅಲೈಹಿ ವ ಸೊಲ್ಲಿಮೂ ತಸ್ಲೀಮಾ+ಅಲ್ಲಾಹುಮ್ಮಾ, ಸೊಲ್ಲಿ ಅಲಾ ಸಯ್ಯದಿನಾ ಮುಹಮ್ಮದಿಂವ್, ವ ಆಲಾ ಆಲಿ ಸಯ್ಯದಿನಾ ಮುಹಮ್ಮದಿಂವ್, ವ ಬಾರಿಕ ವ ಸೊಲ್ಲಮ್"

(ಫ) ನಂತರ ಹೀಗೆ ಪಠಿಸಬೇಕು:—

"ಸುಬ್ಹಾನ ರಬ್ಬಿಕ ರಬ್ಬಿಲ್ ಇಜ್ಜತಿ ಅಮ್ಮಾ ಯಸಿಫೂನ್, ವ ಸಲಾಮುನ್ ಅಲಲ್ ಮುರ್ಸಲೀನ್ ವಲ್ ಹಮ್ದು ಲಿಲ್ಲಾಹಿ ರಬ್ಬಿಲ್ ಆಲಮೀನ್"

—×—

## (೨) ಜುಬ್ಹಾ

:— "ಜುಬ್ಹಾ" ಅಂದರೆ ಏನು ? ಜಬ್ಹಾ ಮಾಡುವ ಪದ್ಧತಿಯು ಯಾವದು ?

ಗುರು:—"ಜುಬ್ಹಾ" ಈ ಶಬ್ದದ ಅರ್ಥವು"ಗಂಟಲವನ್ನು ಕೊಯ್ಯು" "ಶಿರಚ್ಛೇದಮಾಡು" ಅಂತಾ ಆಗುತ್ತದೆ. ಆದರೆ ಇಸ್ಲಾಮು ಧರ್ಮದಲ್ಲಿ ಈ ಶಬ್ದಕ್ಕೆ ಒಂದು ವಿಶಿಷ್ಟವಾದ ಅರ್ಥವಿದೆ. ಮಾಂಸವನ್ನು ಆಹಾರರೂಪವಾಗಿ ಉಪಯೋಗಿಸುವ ಉದ್ದೇಶದಿಂದ, ಯಾವದಾದರೊಂದು ಹಲಾಲ ಪ್ರಾಣಿಯ (ಅಂದರೆ, ಆಹಾರ ರೂಪವಾಗಿ ಉಪಯೋಗಿಸಲು ಯೋಗ್ಯವಾದದ್ದೆಂದು ಧರ್ಮಕಟ್ಟಳೆಗಳಿಂದ ನಿರ್ಣಯಿಸಲ್ಪಟ್ಟಂಥ ಪ್ರಾಣಿಯ) ಗಂಟಲವ ಲಳಿಗೆ ಯನ್ನೂ, ಮತ್ತು ಗಂಟಲದ ಎರಡೂ ಬದಿಗಳಲ್ಲಿರುವ ರಕ್ತದ ನಾಳೆಗಳನ್ನೂ, ಹದನಾದ ಚೂರಿಯಂಥ ಒತ್ತರದಿಂದ ಕೊಯ್ದು, ಶರೀರದ ರಕ್ತವೆಲ್ಲವೂ ಹೊರಬರುವಂತೆ ಮಾಡುವದಕ್ಕೆ "ಜುಬ್ಹಾ" ಅನ್ನುತ್ತಾರೆ. ಮಾಂಸವನ್ನು ಆಹಾರ ರೂಪವಾಗಿ ಉಪಯೋಗಿಸುವ ಉದ್ದೇಶದಿಂದಲೇ ಹಲಾಲ ಪ್ರಾಣಿ ಗಳನ್ನು ಜಬ್ಹಾ ಮಾಡಬೇಕು. ವಿನಾಕಾರಣವಾಗಿ ಪ್ರಾಣಿಗಳನ್ನು ಕೊಲ್ಲುವ ದರಿಂದ ಅಥವಾ ಹಿಂಸಿಸುವದರಿಂದ ಪ್ರಾಣಿ—ಹತ್ಯಾ ದೋಷವು ತಟ್ಟುವದು. ಯಾವದೇ ಪ್ರಾಣಿಯನ್ನು ಜುಬ್ಹಾ ಮಾಡುವ ಮೊದಲು ಚೂರಿಯನ್ನು ಸ್ವಚ್ಛವಾಗಿ ತೊಳೆಯಬೇಕು.ಆ ಮೇಲೆ"ಜುಬ್ಹಾ"ದ ನಿಯ್ಯತ್ ಮಾಡಬೇಕು. ನಿಯ್ಯತ್ ಹೀಗೆ ಇರುತ್ತದೆ:—

> "ನವೈತು ಅನ್ ಅಜ್ಬಹ್ ಹಾಜಲ್ ....×.... ಹತ್ತಾ ಯಖ್ರುಜು ಮಿನ್‌ಹು ದಮ್ಮುಮ್ಮಸ್ಫೂಹನ್, ಹಲಾಲನ್ ತೊಯ್ಯಬನ್; ಬಿಸ್ಮಿಲ್ಲಾಹಿ ಅಲ್ಲಾಹು ಅಕ್ಬರ್."

(ಟಿಪ್ಪಣಿ:— ಬಕರ್ [ಆಕಳು]; ಜಮಲ್ [ಒಂಟೆ]; ಗನಮ್ [ಕುರಿ]; ಜಾಮೂಸ [ಎಮ್ಮೆ, ಕೋಣ]; ದುಜಾ[ಕೋಳಿ]; ಜಬಯತಿ[ಚಿಗರಿ] ಮತ್ತು ತೊಯ್ಯರ್ [ಹಕ್ಕಿ], ಇವುಗಳಲ್ಲಿ ಯಾವದನ್ನು ಜುಬ್ಹಾ ಮಾಡಬೇಕಾಗಿದೆಯೋ, ಅದನ್ನು ....×.... ಇಲ್ಲಿ ಅನ್ನಬೇಕು.")

ಜುಬ್ಹಾ ಮಾಡುವವನು ಶ್ರದ್ಧಾವಂತನೂ ಮತ್ತು ಜುಬ್ಹಾದ ನೇಮಗಳನ್ನು ಬಲ್ಲವನೂ ಇರಬೇಕು; ಮತ್ತು ಯಾವ ಪಶು ಪಕ್ಷಿಗಳು ಹಲಾಲ ಇರುತ್ತವೆ

ಮತ್ತು ಯಾವವು ಹರಾಮ್(ನಿಷೇಧಿಸಲ್ಪಟ್ಟಂಥವು)ಇರುತ್ತವೆ ಎಂಬುವದನ್ನು ಬಲ್ಲವನಿರಬೇಕು.

ಶಿಷ್ಯ:— ತಾನಾಗಿಯೇ ಸ್ವಾಭಾವಿಕವಾಗಿ ಸತ್ತಂಥ ಪಶು ಅಥವಾ ಪಕ್ಷಿಯ ಮಾಂಸವನ್ನು ತಿನ್ನಬೇಕೋ ತಿನ್ನಬಾರದೋ ?

ಗುರು:— ತಿನ್ನಲೇಬಾರದು. ಯಾಕಂದರೆ, ರೋಗಾದಿಗಳಿಂದ ಸತ್ತು ಹೋದಂಥ ಪಶು ಅಥವಾ ಪಕ್ಷಿಯ ಮಾಂಸವನ್ನು ತಿಂದರೆ, ಅದು ಶರೀರಕ್ಕೆ ಬಾಧಕವಾಗುವದು. ಇದಲ್ಲದೆ, ಸತ್ತ ಪ್ರಾಣಿಯ ರಕ್ತವು ಶರೀರದಲ್ಲಿ ಮಾಂಸದ ಮಧ್ಯದಲ್ಲಿಯೇ ಗಟ್ಟಿಯಾಗಿ ಹೆರತು ಹೋಗುವದಾದ್ದರಿಂದ, ಅಂಥ ರಕ್ತದುಂಬಿದ ಮಾಂಸವು ತಿನ್ನಲು ರುಚಿಕರವಿರುವದಿಲ್ಲ ಮತ್ತು ಶರೀರಕ್ಕೆ ಬಾಧಕವಾಗುವದು. ಆದ್ದರಿಂದ, ಸತ್ತ ಪ್ರಾಣಿಯ ಮಾಂಸವನ್ನು ಇಸ್ಲಾಮ್ ಧರ್ಮವು ನಿಷೇಧಿಸುತ್ತದೆ.

ಶಿಷ್ಯ:— ಮಾನವನಿಗೆ ಉಪಯುಕ್ತವಿರುವ ಸಕಲ ಪ್ರಾಣಿಗಳಲ್ಲಿಯೂ ದಯತೋರಿಸಬೇಕೆಂದು ಇಸ್ಲಾಮ್ ಧರ್ಮವು ಹೇಳುತ್ತಿದೆ. ಅಂದಮೇಲೆ, ಮಾಂಸಾಹಾರಕ್ಕಾಗಿ ಪ್ರಾಣಿಗಳನ್ನು ಕೊಲ್ಲುಹದು ಅಧರ್ಮವಾಗುವದಿಲ್ಲವೇ?

ಗುರು:— ಇಲ್ಲ, ಅಧರ್ಮವಾಗುವದಿಲ್ಲ. ಯಾಕಂದರೆ ಈ ಜಗತ್ತಿನಲ್ಲಿರುವ ಸಕಲ ಪ್ರಾಣಿಗಳನ್ನು ಪರಮಾತ್ಮನು ಮಾನವನ ಉಪಯೋಗಕ್ಕಾಗಿಯೇ ಹುಟ್ಟಿಸಿರುವನು. ಆದ್ದರಿಂದ, ತನ್ನ ಕಲ್ಯಾಣಕ್ಕಾಗಿ ತನಗೆ ಯೋಗ್ಯವೆಂದೆಣಿಸಿದ ರೀತಿಯಲ್ಲಿ, ಯಾವದೇ ವಸ್ತುವನ್ನು ಅಥವಾ ಪ್ರಾಣಿಯನ್ನು ಮಾನವನು ಉಪಯೋಗಿಸಬಲ್ಲನು. ಈ ಜಗತ್ತಿನ ಸಕಲ ವಸ್ತುಗಳ ಮೇಲೆ ಮಾನವನ ಒಡೆತನವಿದೆ. ಈ ವಿಷಯವಾಗಿ ಕುರಾನ ಗ್ರಂಥವು ಘೋಷಿಸುವದೇನೆಂದರೆ -"(ಎಲೈ ಮಾನವರೇ) ಈ ಜಗತ್ತಿನಲ್ಲಿರುವ ಎಲ್ಲವುಗಳನ್ನು ನಿಮಗಾಗಿಯೇ ಪರಮಾತ್ಮನು ಹುಟ್ಟಿಸಿದನು" [ಸೂರೆಬಕರ್, ರು. ೩; ಆ. ೯] ಕಲ್ಲು, ಕಟ್ಟಿಗೆ, ಮಣ್ಣು, ಸಸ್ಯಾದಿಗಳನ್ನು ತನ್ನ ಕಲ್ಯಾಣಕ್ಕಾಗಿ ತನಗೆ ಸರಿಕಂಡ ರೀತಿಯಲ್ಲಿ ಉಪಯೋಗಿಸಲು ಮಾನವನಿಗೆ ನಿಸರ್ಗದ ಪ್ರತಿಬಂಧವಿರುವದಿಲ್ಲ. ಇದೇ ರೀತಿಯಾಗಿ, ತನಗೆ ಉಪಯುಕ್ತವಾಗುವ ಪ್ರಾಣಿಗಳನ್ನು ತನ್ನ ಕಲ್ಯಾಣಕ್ಕಾಗಿ ತನಗೆ ಯೋಗ್ಯವೆನಿಸಿದ ರೀತಿಯಲ್ಲಿ ಉಪಯೋಗಿಸಲು

ನೈಸರ್ಗಿಕವಾದ ಪ್ರತಿಬಂಧಗಳಾವವೂ ಇರುವದಿಲ್ಲ. ತನ್ನ ಬೇಸಾಯಕ್ಕಾಗಿ ಅಥವಾ ಹಾಲು ಹೈನಗಳಿಗಾಗಿ ಉಪಯುಕ್ತವಾದ ಪ್ರಾಣಿಗಳನ್ನು, ತನ್ನ ಕಲ್ಯಾಣಕ್ಕಾಗಿಯೇ ಮಾನವನು ಸಾಕಿ ಸಲಹುವನು; ಮತ್ತು ಅದೇ ಪ್ರಾಣಿಗಳು ತನ್ನ ಕೆಲಸಕ್ಕಾಗಿ ನಿರುಪಯುಕ್ತವಾದೊಡನೆ ಅವುಗಳನ್ನು ಕೊಂದು, ಮಾಂಸವನ್ನು ಪಡೆದು ಆಹಾರ ರೂಪವಾಗಿ ಸೇವಿಸುವನು. ತನಗೆ ಉಪಯುಕ್ತವಿರುವ ಪ್ರಾಣಿಗಳನ್ನು ತನ್ನ ಕಲ್ಯಾಣಕ್ಕಾಗಿಯೇ ಮಾನವನು ಸಾಕುತ್ತಾನಲ್ಲದೆ, ಕರ್ತವ್ಯ ಧೃಷ್ಟಿಯಿಂದ ಸಾಕುವದಿಲ್ಲ. ಇದೇ ರೀತಿಯಾಗಿ, ತನಗೆ ನಿರುಪಯುಕ್ತವಾಗಿರುವ ಪ್ರಾಣಿಗಳನ್ನು ತನ್ನ ಕಲ್ಯಾಣಕ್ಕಾಗಿಯೇ ಕೊಲ್ಲುತ್ತಾನಲ್ಲದೆ ಪ್ರಾಣಿ-ಹತ್ಯಾ ಮಾಡಬೇಕೆಂಬ ಉದ್ದೇಶದಿಂದಲ್ಲ. ಹಾಲು-ಹೈನಗಳಿಗಾಗಿ ಅಥವಾ ಮಾಂಸಕ್ಕಾಗಿ ಪ್ರಾಣಿಗಳನ್ನು ಉಪಯೋಗಿಸಿಕೊಳ್ಳುವ ಮಾನವ-ಪ್ರವೃತ್ತಿಯು ಅತ್ಯಂತ ನೈಸರ್ಗಿಕವಾಗಿದೆ ; ಯಾಕಂದರೆ, ಪ್ರಾಣಿ-ಆಹಾರವು (Animal Food) ಮಾನವನಿಗಾಗಿ ಅತ್ಯಾವಶ್ಯಕವಾದ ಮತ್ತು ನೈಸರ್ಗಿಕವಾದ ಆಹಾರವಾಗಿದೆ. ಪ್ರಾಣಿ-ಆಹಾರವಿಲ್ಲದೆ (ಮಾಂಸ; ಅಥವಾ ತತ್ತಿ, ಅಥವಾ ಹಾಲು ಇಲ್ಲದಲೆ) ಬರೇ ಶಾಕಾ-ಹಾರದಿಂದ ಮಾನವ ಶರೀರದ ಮತ್ತು ಮಾನವತ್ವದ (ಅಂದರೆ, ಮಾನವನಲ್ಲಿ ಇರಲೇಬೇಕಾದ ನೈಸರ್ಗಿಕ ಗುಣಗಳ) ಸರ್ವಾಂಗೀನ ಬೆಳವಣಿಗೆಯಾಗಲಾರದು. ಮಾನವನಿಗೆ ಎರಡೂ ತರದ ಆಹಾರಗಳ ಅವಶ್ಯಕತೆ ಇರುತ್ತದೆ. ಬರೇ ಶಾಕಾ-ಹಾರದಿಂದಾಗಲೀ ಅಥವಾ ಬರೇ ಪ್ರಾಣಿ-ಆಹಾರದಿಂದಾಗಲೀ ಮಾನವನ ಸರ್ವಾಂಗೀನ ಉನ್ನತಿಯಾಗುವದು ಸಾಧ್ಯವಿಲ್ಲ; ಯಾಕಂದರೆ, ಮಾನವನು ಸಮ್ಮಿಶ್ರ-ಪ್ರಾಣಿಯಾಗಿರುವನಾದ್ದರಿಂದ, ಅವನಿಗೆ ಸಮಿಶ್ರ-ಆಹಾರದ (ಅಂದರೆ ಪ್ರಾಣಿ-ಆಹಾರ ಮತ್ತು ಶಾಕಾಹಾರಗಳ) ಅವಶ್ಯಕತೆ ಇದೆ. ಈ ಸಿದ್ಧಾಂತವನ್ನು ಜಗತ್ತಿನ ಬುದ್ಧಿವಂತರೆಲ್ಲರೂ ಒಪ್ಪಿಕೊಂಡಿದ್ದಾರೆ.

ಆಹಾರ ದೃಷ್ಟಿಯಿಂದ ನೋಡಿದರೆ, ಶಾಕಾಹಾರಿ-ಪ್ರಾಣಿಗಳು ಮತ್ತು ಮಾಂಸಾಹಾರಿ ಪ್ರಾಣಿಗಳು ಎಂಬ ಎರಡು ವಿಧದ ಪ್ರಾಣಿಗಳು ನಮಗೆ ಕಂಡು ಬರುವವು. ಎಮ್ಮೆ, ಆಕಳು, ಕತ್ತೆ, ಕುದುರೆ,ಕುರಿ ಮೊಲಾದ ಶಾಕಾಹಾರಿ ಪ್ರಾಣಿಗಳಿಗೆ ಶಾಕಾಹಾರವೇ ನೈಸರ್ಗಿಕವಾದ ಆಹಾರವಾಗಿದೆ. ಆದ್ದರಿಂಧ ಬರೇ ಶಾಕಾಹಾರದಿಂದ ಅವು ಸಧೃಢವಾಗಿ ಬೆಳೆಯುತ್ತವೆ. ಇದೇ

ರೀತಿಯಾಗಿ, ಸಿಂಹ, ಹುಲಿ, ಚಿರ್ಚ, ಬೆಕ್ಕು, ನಾಯಿ ಮೊದಲಾದ ಮಾಂಸಾಹಾರೀ ಪ್ರಾಣಿಗಳಿಗಾಗಿ, ಮಾಂಸಾಹಾರವೇ ನೈಸರ್ಗಿಕ ಆಹಾರವಾಗಿದೆ. ಆದ್ದರಿಂದಲೇ, ಮಾಂಸಾಹಾರವಿಲ್ಲದೆ ಅವು ಸಧೃಢವಾಗಿ ಮತ್ತು ನೈಸರ್ಗಿಕವಾಗಿ ಬೆಳೆಯಲಾರವು. ಶಾಕಾಹಾರದ ಮೇಲೆಯೇ ಬೆಳೆಸಲ್ಪಟ್ಟ ಹುಲಿಯಲ್ಲಿ, ಹುಲಿಯತ್ವವು (ಅಂದರೆ, ಹುಲಿಯಲ್ಲಿ ಇರಬೇಕಾದ ಶಕ್ತಿ, ಸಾಮರ್ಥ್ಯ, ಚಪಲತೆ, ಕ್ರೋಧಗಳು) ಇರಲಾರವು. ಶಾಕಾಹಾರದ ಮೇಲೆಯೇ ಬೆಳೆಸಲ್ಪಟ್ಟಂಥ ಸಿಂಹದೊಳು ಸಿಂಹತ್ವವು ಬರಲಾರದು. ಇದರಿಂದ ಸ್ಪಷ್ಟವಾಗುವದೇನಂದರೆ, ಆಯಾ ಪ್ರಾಣಿಗಳ ನೈಸರ್ಗಿಕವಾದ ಬೆಳವಣಿಗೆಯು, ಅವುಗಳ ನೈಸರ್ಗಿಕವಾದ ಆಹಾರಗಳಿಂದಲೇ ಸಾಧ್ಯವಾಗುವದು. ಈ ಸಿದ್ಧಾಂತವನ್ನಾದರೂ ಜಗತ್ತಿನ ಬುದ್ಧಿವಂತರೆಲ್ಲರೂ ಒಪ್ಪಿಕೊಂಡಿರುತ್ತಾರೆ.

ಮಾನವನ ನೈಸರ್ಗಿಕವಾದ ಗುಣಗಳನ್ನೂ ಮತ್ತು ಪಾಚಕ ಅವಯವಗಳನ್ನೂ ಸೂಕ್ಷ್ಮವಾಗಿ ಅವಲೋಕಿಸಿದರೆ, ಮಾನವನು ಮಾಂಸಾಹಾರಿಯೂ ಅಹುದು ಮತ್ತು ಶಾಕಾಹಾರಿಯೂ ಅಹುದು ಎಂಬ ನಜತ್ವವು ಸ್ಪಷ್ಟವಾಗುವದು. ಕೆಳಗಿನ ಚಾರ್ಟದಿಂದ(ಪತ್ರಿಕೆಯಿಂದ) ಈ ಮಾತು ಚನ್ನಾಗಿ ಸ್ಪಷ್ಟವಾಗುವದು:—

| ಗುಣಗಳು ಮತ್ತು ಪಾಚಕಾವಯವಗಳು | ಶಾಕಾಹಾರಿ ಪ್ರಾಣಿಗಳಲ್ಲಿ | ಮಾಂಸಾಹಾರಿ ಪ್ರಾಣಿಗಳಲ್ಲಿ | ಮಾನವನಲ್ಲಿ |
|---|---|---|---|
| ೧) ಗುಣಗಳು | ಆಕಳು, ಎಮ್ಮೆ, ಕುರಿ ಮೊದಲಾದ ಶಾಕಾಹಾರಿ ಪ್ರಾಣಿಗಳಲ್ಲಿ ನಮ್ರತೆ. ಸಾಧೂತನ, ಅಸಹಾಯಕತೆ, ಅಧೀರತೆ ಮೊದಲಾದ ಸೌಮ್ಯ ಗುಣಗಳಿರುತ್ತವೆ. | ಹುಲಿ, ಸಿಂಹ, ಬೆಕ್ಕು ಮೊದಲಾದ ಮಾಂಸಾಹಾರಿ ಪ್ರಾಣಿಗಳಲ್ಲಿ ಧೈರ್ಯ, ಸಿಟ್ಟು, ಸಾಹಸ ಧೀರತೆ ಮೊದಲಾದ ತೇಜೋಗುಣಗಳು ಇರುತ್ತವೆ. | ಮಾನವ ಪ್ರಾಣಿಯಲ್ಲಿ ಎರಡೂ ತರದ |

| | | | |
|---|---|---|---|
| ೨) ಮೆಲಕಾಡಿಸುವ ಪದ್ಧತಿ | ತಿನ್ನುವಾಗ ಕೆಳದವಡೆಯನ್ನು ಅತ್ತಿಂದಿತ್ತ ಎಡಬಲಕ್ಕೆ ಅಲ್ಲಾ | ಎಡಬಲಕ್ಕೆ ಅಲ್ಲಾಡಿಸದೆ, ಮೇಲೆ ಕೆಳಕ್ಕೆ ಅಲಾಡಿಸುತ್ತವೆ. | ಮೇಲೆ ಕೆಳಗೂ ಅಲ್ಲಾಡಿಸ ಬಲ್ಲನು, ಎಡಬಲಕ್ಕೂ ಅಲ್ಲಾಡಿಸಬಲ್ಲನು. |
| ೩) ಹಲ್ಲುಗಳು | ಅರೆದು ತಿನ್ನುವದಕ್ಕಾಗಿ ಬರೇ ಚಪ್ಪಟೆಯಾದ ಹಲ್ಲುಗಳೇ ಮಾತ್ರ ಇರುತ್ತವೆ. | ಹರಿದು ತಿನ್ನುವದಕ್ಕಾಗಿ ಬರೇ ಚೂಪಾದ ಹಲ್ಲುಗಳೇ ಮಾತ್ರ ಇರುತ್ತವೆ. | ಅರೆದು ಮತ್ತು ಹರಿದು ತಿನ್ನುವದಕ್ಕಾಗಿ ಎರಡೂ ತರದ ಹಲ್ಲುಗಳಿರುತ್ತವೆ. |
| ೪) ಅನ್ನಕೋಶ | ಅನ್ನಕೋಶವು ಪ್ರಮಾಣದಲ್ಲಿ ಬಹು ದೊಡ್ಡದಿರುತ್ತವೆ; ಮತ್ತು ಅನ್ನಕೋಶದ ಒಳಪರತದಲ್ಲಿ ಜೇನು ಹುಟ್ಟಿನಂತೆ ಸಣ್ಣ ಸಣ್ಣ ರಂಧ್ರಗಳಿರುತ್ತವೆ. | ಪ್ರಮಾಣದಲ್ಲಿ ಸಣ್ಣದಿರುತ್ತದೆ. ಮತ್ತು ಒಳಪರತವು ನುಣಪಾಗಿ ಇರುತ್ತದೆ. | ಮಧ್ಯ ಪ್ರಮಾಣದಲ್ಲಿದ್ದು; ಒಳಪರತವು ರಂಧ್ರ-ರಂಧ್ರವಾದದ್ದೂ ಇರುವದಿಲ್ಲ ಮತ್ತು ನುಣಪಾಗಿಯೂ ಇರುವದಿಲ್ಲ. ಆದರೆ ಹರಬರಕಾಗಿ ಇರುತ್ತವೆ. |

| | | | |
|---|---|---|---|
| ೫) ಕರಳುಗಳು | ಪ್ರಮಾಣದಲ್ಲಿ ಬಹಳೇ ಉದ್ದ ವಾಗಿದ್ದು, ಕಡಿಮೆ ಅಗಲವಾದವು ಗಳು ಇರುತ್ತವೆ. | ಪ್ರಮಾಣದಲ್ಲಿ ಕಡಿಮೆ ಉದ್ದ ವಾಗಿದ್ದು, ಹೆಚ್ಚು ಅಗಲವಾದವು ಗಳು ಇರುತ್ತವೆ. | ಎರಡೂ ತರದ ಕರಳುಗಳು ಇರುತ್ತವೆ, |
| ೬) ಪಚನಶಕ್ತಿ | ಮಾಂಸಾಹಾರವನ್ನು ಪಚನ ಮಾಡಲಾರವು; ಆದರೆ ಶಾಕಾಹಾರವನ್ನು ಚನ್ನಾಗಿ ಪಚನ ಮಾಡ | ಮಾಂಸಾಹಾರವನ್ನು ಚನ್ನಾಗಿ ಪಚನ ಮಾಡಬಲ್ಲವು; ಆದರೆ ಶಾಕಾಹಾರವನ್ನು ಪಚನ ಮಾಡಲಾರವು. | ಎರಡೂ ತರದ ಆಹಾರಗಳನ್ನು ಚನ್ನಾಗಿ ಪಚನ ಮಾಡಬಲ್ಲನು. |
| ೭) ವಾಸನೆಯ | ವಾಸನೆಯ ಶಕ್ತಿಯು ಅತಿ ಸೌಮ್ಯವಿರುತ್ತದೆ | ವಾಸನೆಯ ಶಕ್ತಿ ಅತಿ ತೀಕ್ಷ್ಣವಿರುತ್ತವೆ. | ಸೌಮ್ಯತೆಯ ಮತ್ತು ತೀಕ್ಷ್ಣತೆಗಳ ಮಧ್ಯಾವಸ್ಥೆಯಲ್ಲಿರುತ್ತದೆ. |

ಆಹಾರ ದೃಷ್ಟಿಯಿಂದ, ಮಾನವನು ಸಮ್ಮಿಶ್ರ-ಪ್ರಾಣಿ ಎಂಬುದು ಮೇಲಿನ ಪತ್ರಿಕೆಯಿಂದ ಸ್ಪಷ್ಟವಾಗುವದು' ನಿಸ್ಸಂದೇಹವಾಗಿ ಮಾಂಸಾಹಾರವು ಮಾನವನ ನೈಸರ್ಗಿಕವಾದ ಆಹಾರವಾಗಿದೆ. ಆದ್ದರಿಂದ, ತನ್ನ ಇತರ ಕೆಲಸಗಳಿಗಾಗಿ ನಿರುಪಯುಕ್ತವಾಗಿರುವ ಪ್ರಾಣಿಗಳನ್ನು ತನ್ನ ಕಲ್ಯಾಣಕ್ಕಾಗಿಯೇ ಕೊಂದು, ಮಾಂಸವನ್ನು ಪಡೆದು, ಆಹಾರರೂಪವಾಗಿ ಅದನ್ನು ಉಪಯೋಗಿಸುವ ಮಾನವ-ಪ್ರವೃತ್ತಿಯು ಅನೈಸರ್ಗಿಕವಾಗಲಾರದು, ಅರ್ಥಾತ್, ಅಧರ್ಮಿಕವಾಗಲಾರದು. ಆದ್ದರಿಂದಲೇ, ಇಸ್ಲಾಮ್ ಧರ್ಮವು ಮಾಂಸಾಹಾರವನ್ನು ಪ್ರತಿಬಂಧಿಸಿರುವದಿಲ್ಲ.

ಶಿಷ್ಯ:—ಮುಸಲ್ಮಾನರ ಹೊರ್ತಾಗಿ, ಜಗತ್ತಿನಲ್ಲಿಯ ಇತರ ಯಾವದೇ ಧರ್ಮದವರು ಮಾಂಸಾಹಾರವನ್ನು ಮಾಡುತ್ತಾರೆಯೋ?

ಗುರು:— ಅಹುದು. ಕ್ರಿಶ್ಚನ್, ಯಹೂದಿ, ಫಾರ್ಶಿ, ಮೊದಲಾದ ಧರ್ಮದವರೂ; ಹಿಂದೂ ಧರ್ಮದಲ್ಲಿಯ ಮರಾಠಾ ಕ್ಷತ್ರಿ, ಶೂದ್ರ ಮೊದಲಾದ ಜಾತಿಯವರೂ ಮಾಂಸಾಹಾರವನ್ನು ಮಾಡುತ್ತಾರೆ. ಆದರೆ, ಹಿಂದೂ ಧರ್ಮದಲ್ಲಿಯ ಕೆಲವು ಜ್ಯಾತಿಯವರು (ಅಂದರೆ, ಬ್ರಾಹ್ಮಣ, ಜೈನ, ಲಿಂಗಾಯತ ಮೊದಲಾದವರು) ಮಾಂಸಾಹಾರವನ್ನು ಮಾಡುವದಿಲ್ಲ. ಮಾಂಸಾಹಾರವನ್ನು ಮಾಡದವರ ಸಂಖ್ಯೆಯು ಜಗತ್ತಿನಲ್ಲಿ ಅತಿ ವಿರಳವಿದೆ. ಜಗತ್ತಿನ ಜನಸಂಖ್ಯೆಯಲ್ಲಿಯ ಶೇಕಡಾ ೯೦ ರಕ್ಕಿಂತ ಹೆಚ್ಚು ಜನರು ಮಾಂಸಾಹಾರಿಗಳಿರುವರು. ಮಾಂಸಾಹಾರವನ್ನು ಮಾಡದಂಥವರು ಸಹ, ಪ್ರಾಣಿ-ಆಹಾರವನ್ನು ಹಾಲಿನ ರೂಪದಲ್ಲಿ ಹೆಚ್ಚಾಗಿ ಸೇವಿಸುತ್ತಾರೆ.

ಶಿಷ್ಯ:— ಪ್ರತಿ ಮುಸಲ್ಮಾನನು ಮಾಂಸಾಹಾರವನ್ನು ಸೇವಿಸಲೇ ಬೇಕೆಂದು ಇಸ್ಲಾಮು ಧರ್ಮದ ಆದೇಶವಿರುತ್ತದೆಯೋ?

ಗುರು:— ಇಲ್ಲ; ಹಾಗೇನೂ ಇಲ್ಲ. ಆದರೆ, ಮಾಂಸಾಹಾರವನ್ನು ಮಾಡಲಿಕ್ಕೆ ಇಸ್ಲಾಮ್ ಧರ್ಮದಲ್ಲಿ ಪ್ರತಿಬಂಧವಿಲ್ಲ.

## —: (೩) ಕುರ್ಬಾನಿ :—

ಶಿಷ್ಯ:— "ಕುರ್ಬಾನಿ" ಅಂದರೆ ಏನು? ಅದನ್ನು ಯಾವಾಗ ಆಚರಿಸಬೇಕು?

ಗುರು:— ಕುರ್ಬಾನಿ ಅಂದರೆ ಬಲಿದಾನ ಅಥವಾ ತ್ಯಾಗ. ಆದರೆ ಇಸ್ಲಾಮ್ ಧರ್ಮದಲ್ಲಿ ಈ ಶಬ್ದಕ್ಕೆ ಒಂದು ವಿಶಿಷ್ಟವಾದ ಅರ್ಥವಿದೆ. ಪರಮಾತ್ಮನ ಆಜ್ಞಾನುಸಾರವಾಗಿ ಹಜರತ್ ಇಬ್ರಾಹೀಮರು ಯಾವ ರೀತಿಯಾಗಿ ತಮ್ಮ ಪ್ರೀತಿಯ ಕಂದನಾದ ಇಸ್ಮಾಯೀಲನನ್ನು ಪರಮಾತ್ಮನಿಗಾಗಿ ಬಲಿದಾನ ನೀಡಲು ಉದ್ಯುಕ್ತರಾಗಿದ್ದರೋ, ಅದೇ ರೀತಿಯಾಗಿ ಪರಮಾತ್ಮನನ್ನು ಸಂತುಷ್ಟಿಸಲು ಎಂಥ ತ್ಯಾಗವನ್ನಾದರೂ ಮಾಡಲು ಸಿದ್ಧನಿದ್ದೇನೆಂಬುದನ್ನು ತೋರ್ಪಡಿಸಲು, ತನ್ನ ವಡೆತನದಲ್ಲಿರುವ ಒಂದು ಕುರಿಯನ್ನು

ಅಥವಾ ಆಕಳವನ್ನು ಅಥವಾ ಒಂಟೆಯನ್ನು ಪರಮಾತ್ಮನಿಗಾಗಿ ಬಲಿದಾನ ಮಾಡುವದಕ್ಕೆ "ಕುರ್ಬಾನಿ" ಅನ್ನುತ್ತಾರೆ.

ಬಹು ಪುರಾತನ ಕಾಲದಲ್ಲಿ ಹ|| ಇಬ್ರಾಹೀಮ ಎಂಬ ಮಹಾ ಸತ್ಪುರುಷರೊಬ್ಬರು ಅರಬಸ್ತಾನದಲ್ಲಿ ಇದ್ದರು. ಹ|| ಇಬ್ರಾಹೀಮರಿಗೆ ಪ್ರವಾದಿಯತ್ವವನ್ನು ದಯಪಾಲಿಸುವದಕ್ಕಿಂತ ಮೊದಲು ಪರಮಾತ್ಮನು ಅವರನ್ನು ನಾನಾ ವಿಧವಾಗಿ ಪರೀಕ್ಷಿಸಿದನು. "ಎಲೋ ಇಬ್ರಾಹೀಮನೇ, ನಿನ್ನ ಪ್ರೀತಿಯ ಕಂದನಾದ ಇಸ್ಮಾಯೀಲನನ್ನು ನನಗಾಗಿ ಬಲಿದಾನ ನೀಡು" ಎಂದು ಪರಮಾತ್ಮನು ಒಮ್ಮೆ ಹ|| ಇಬ್ರಾಹೀಮರಿಗೆ ಸ್ವಪ್ನದಲ್ಲಿ ಆಜ್ಞೆಯನ್ನಿತ್ತನು. ಮರುದಿನವೇ ಹ|| ಇಬ್ರಾಹೀಮರು ತಮ್ಮ ಮಗನನ್ನು ಬಲಿಯಾಗಿ ಕೊಡಲು ಸಿದ್ಧರಾದರು. ಮಗನಿಗೆ ಗುಸ್ಲ ಮಾಡಿಸಿ ಮಡಿಯಾದ ವಸ್ತ್ರಗಳನ್ನು ತೊಡಿಸಿ, ಕಾಬಾ ಮಂದಿರದ ಮುಂದೆ ಮಲಗಿಸಿ, ಹದನಾದ ಚೂರಿಯಿಂದ ಮಗನ ಕುತ್ತಿಗೆಯನ್ನು ಕೋಯತೊಡಗಿದರು. ಆದರೆ ಅದೆಷ್ಟು ಪ್ರಯತ್ನಮಾಡಿದರೂ ಸಹ ಕುತ್ತಿಗೆಯಲ್ಲಿ ಚೂರಿಯು ನಾಟಲೇಇಲ್ಲ. ಆಶ್ಚರ್ಯ ಚಕಿತರಾಗಿ ಹ|| ಇಬ್ರಾಹೀಮರು ಆಕಾಶದತ್ತ ಮುಖವನ್ನೆತ್ತಿ "ಹೇ ಪ್ರಭು ನಾನೆಷ್ಟು ಪ್ರಯತ್ನಿಸಿದರೂ, ಈ ಚೂರಿಯು ಮಗನ ಗಂಟಲದಲ್ಲಿ ನಾಟಲೊಲ್ಲದಲ್ಲಾ! ಇದೇನು ಅದ್ಭುತ!! ಹೇ ಭಕ್ತ-ವತ್ಸಲಾ, ಪ್ರೇಮ ಮಮತೆಗಳನ್ನು ಬದಿಗೊತ್ತಿ, ಅಂತಃಕರಣಪೂರ್ವಕವಾಗಿ ಮಗನನ್ನು ನಿನಗೆ ಬಲಿದಾನ ಕೊಡುತ್ತಲಿದ್ದೇನೆಯಾದರೂ, ನಾನು ನೀಡುತ್ತಲಿದ್ದ ಈ ಬಲಿದಾನವು ನಿನಗೆ ಸ್ವೀಕೃತವಾಗಲೊಲ್ಲದೇಕೆ? ನನ್ನ ಭಕ್ತಿಯಲ್ಲಿ ಕುಂದು ಕೊರತೆಗಳೇನಾದರೂ ಇರುತ್ತವೆಯೋ? ಹಾಗಿದ್ದರೆ, ಹೇ ಕ್ಷಮಾಪತಿಯೇ, ನನ್ನ ತಪ್ಪುಗಳನ್ನು ಕ್ಷಮಿಸು; ಮತ್ತು ನಿನ್ನಾಜ್ಞೆಯನ್ನು ಪಾಲಿಸುವವಕ್ಕಾಗಿಯೇ, ನಾನು ನೀಡುತ್ತಿರುವ ಈ ಬಲಿದಾನವನ್ನು ಸ್ವೀಕರಿಸು" ಎಂದು ಅನನ್ಯಭಾವದಿಂದ ಪರಮಾತ್ಮನನ್ನು ಪ್ರಾರ್ಥಿಸಿ, ಚೂರಿಯನ್ನು ಜೋರಾಗಿ ಮುಷ್ಟಿಯಲ್ಲಿ ಹಿಡಿದು ಮಗನ ಶಿರವನ್ನು ಕೊಯ್ಯಲುದ್ಯುಕ್ತರಾಗಲು, ಅವರ ಮುಂದೆ ಮಲಗಿದ ಮಗನು ಅದೃಶ್ಯನಾಗಿ ಆ ಸ್ಥಳದಲ್ಲಿ ಒಂದು ಕುರಿಯು ಮಲಗಿರುವದನ್ನು ಅವರು ಕಂಡರು. ಇದೇನು ಆಶ್ಚರ್ಯವೆಂದು ಅವರು ಯೋಚಿಸುತ್ತಿರುವಾಗ, ಆಕಾಶದಿಂದ ಒಂದು ಧ್ವನಿಯು ಕೇಳಿಸಿತು. "ಎಲೋ ಭಕ್ತಾಗ್ರಣಿಯಾದ

ಇಬ್ರಾಹೀಮನೇ, ನಿನ್ನ ಭಕ್ತಿಗೆ ಪರಮಾತ್ಮನು ಮೆಚ್ಚಿದ್ದಾನೆ. ನಿನ್ನ ಮುಂದೆ ಮಲಗಿರುವ ಕುರಿಯನ್ನು (ದುಂಬಾ) ಪರಮಾತ್ಮನು ಆಕಾಶದಿಂದ ಕಳಿಸಿ ಕೊಟ್ಟಿದ್ದಾನೆ. ಆ ಕುರಿಯನ್ನೇ ಪರಮಾತ್ಮನಿಗೆ ಬಲಿದಾನ ನೀಡು; ಪರಮಾತ್ಮನು ಸಂತುಷ್ಟನಾಗುವನು.'' ಅವರಂತೆ ಹ|| ಇಬ್ರಾಹೀಮರು ಆ ಕುರಿಯನ್ನು ಬಲಿದಾನ ಮಾಡಿದರು. ಅಂದಿನಿಂದ, ಹ|| ಇಬ್ರಾಹೀಮರ ಅನುಯಾಯಿಗಳು (ಉಮ್ಮತೆ-ಇಬ್ರಾಹೀಮ್.) ಕುರ್ಬಾನಿ ವಿಧಿಯನ್ನು ಆಚರಿಸುತ್ತ ಬಂದಿದ್ದಾರೆ. ಆರ್ಥಿಕ ಪರಿಸ್ಥಿತಿ ಚೆನ್ನಾಗಿದ್ದ ಪ್ರತಿ ಮುಸಲ್ಮಾನನು ''ಕುರ್ಬಾನಿ'' ವಿಧಿಯನ್ನು ಆಚರಿಸಲೇಬೇಕೆಂದು ಇಸ್ಲಾಮ್ ಧರ್ಮದ ಆದೇಶವಿದೆ.

ಜಿಲ್‌ಹಜ್ ತಿಂಗಳ(ಬಕ್ರೀದ ತಿಂಗಳ) ೧೦ನೇ ಅಥವಾ ೧೨ ನೇ ತಾರೀಖಿನ ದಿವಸ ಕುರ್ಬಾನಿಯನ್ನು ಕೊಡಬೇಕು; ಆದರೆ,೧೦ನೇ ತಾರೀಖಿನ ದಿವಸ (ಬಕ್ರೀದ ಹಬ್ಬದ ದಿವಸ) ಕೊಡುವದು ಹೆಚ್ಚು ಶ್ರೇಯಸ್ಕರವಾಗಿದೆ.

ಶಿಷ್ಯ:— ಪ್ರತಿ ಮುಸಲ್ಮಾನನು ಕುರ್ಬಾನಿ ಕೊಡಲೇಬೇಕೇನು ?

ಗುರು:— ಇಲ್ಲ. ಕುರ್ಬಾನಿಯ ಬಂಧನವು ಪ್ರತಿಯೊಬ್ಬರಿಗಿಲ್ಲ. ಆರ್ಥಿಕ ಪರಿಸ್ಥಿತಿ ಚನ್ನಾಗಿದ್ದವರಿಗಷ್ಟೇ ಕುರ್ಬಾನಿಯ ಬಂಧನವಿರುತ್ತದೆ. ಕುರ್ಬಾನಿ ಕೊಡಲು ಅರ್ಹನಾದವನು, ತನ್ನ ವತಿಯಿಂದ ಮತ್ತು ತನ್ನ ಮೇಲೆ ಅವಲಂಬಿತರಾದ ತನ್ನ ಕುಟುಂಬದ ಪ್ರೌಢರ ವತಿಯಿಂದ, ಕುರ್ಬಾನಿ ಕೊಡಬೇಕು. ಒಬ್ಬರ ವತಿಯಿಂದ ಒಂದು ವರ್ಷಕ್ಕಿಂತ ದೊಡ್ಡದಾದ ಒಂದು ಕುರಿಯನ್ನು ಕರ್ಬಾನಿ ಮಾಡಬೇಕು; ಇಲ್ಲವೆ ಏಳು ಜನರು ಪಾಲುಗಾರರಾಗಿ ಒಂದು ಆಕಳವನ್ನು ಅಥವಾ ಒಂದು ಒಂಟೆಯನ್ನು ಕುರ್ಬಾನಿ ಕೊಡಬೇಕು. ಕುರ್ಬಾನಿಯ ಪ್ರಾಣಿಯಲ್ಲಿ ಅವಯವ-ಹೀನತೆಗಳು ಇರಬಾರದು; ಮತ್ತು ರೋಗಾದಿಗಳು ಇರಕೂಡದು.

ಶಿಷ್ಯ:— ಕುರ್ಬಾನಿಯ ವಿಧಿಗಳನ್ನೆಲ್ಲ ವಿವರಿಸಿ ಹೇಳುವಿರಾ ?

ಗುರು: —ಕುರ್ಬಾನಿಗೆ ಯೋಗ್ಯವಾದ ಪ್ರಾಣಿಯನ್ನು ಜುಬ್ಹಾ ಮಾಡುವಾಗ, ಕಾಬಾದ ದಿಕ್ಕಿನೆಡೆ ಅದರ ಮುಖವಾಗುವಂತೆ ಎಡಮಗ್ಗಲದ ಮೇಲೆ ಅದನ್ನು ಮಲಗಿಸಿ, ಅದರ ಬಲಗಾಲವನ್ನು ಮಡಿಚಿ ಅದರ ಹೆಗಲ ಮೇಲೆ

ಇಡಬೇಕು. ಕುರ್ಬಾನಿ ಕೊಡುವಂಥವನು ಸ್ವತಃ ತಾನೇ ಜುಬ್ಹಾ ಮಾಡುವದು ಉತ್ತಮ. ಆದರೆ, ಅವನಿಂದ ಶಕ್ಯವಾಗದಿದ್ದರೆ,ಇತರರಿಗೆ ಜುಬ್ಹಾ ಮಾಡಲು ಅಪ್ಪಣೆಯನ್ನು ಕೊಡಬೇಕು. ಮತ್ತು ಕುರ್ಬಾನಿಯ ಸಮಯದಲ್ಲಿ ತಾನು ಸ್ವತಃ ಅಲ್ಲಿ ಹಾಜರ್ ಇರಬೇಕು. ಕುರ್ಬಾನಿಯ ವಿಧಿಯನ್ನು ನೆರವೇರಿಸುವವನು (ಅಂದರೆ ಕುರ್ಬಾನಿಯ ಪ್ರಾಣಿಯನ್ನು ಜುಬ್ಹಾ ಮಾಡುವವನು) ಮೊದಲು ಹೀಗೆ ನಿಯ್ಯತ್ ಪಠಿಸಬೇಕು:—

"ಇನ್ನೀ ವಜ್‌ಹತು ವಜ್‌ಹಿಯ ಲಿಲ್ಲಜೀ ಫತರಸ್ಸಮಾವಾತಿ ವಲ್ ಆರ್ದಿ ಹನೀಫಂವ್,ವ ಮಾ ಅನಾ ಮಿನಲ್ ಮುಶ್ರಿಕೀನ್+ ಇನ್ನ ಸೊಲಾತಿ ವ ನುಸುಕಿ, ವ ಮಹ್‌ಯಾಯಿ ವ ಮುಮಾತಿ ಲಿಲ್ಲಾಹಿ ರಬ್ಬಿಲ್ ಆಲಮೀನ್ +ಲಾ ಷರೀಕ ಲಹು ಬಿ ಜಾಲಿಕ, ಉಮಿರ್ತು ವ ಅನಾ ಅವ್ವಲುಲ್ ಮುಸ್ಲಿಮೀನ್+ಅಲ್ಲಾಹುಮ್ಮ ಮಿನ್ಕ ವಲಕ, ಬಿಸ್ಮಿಲ್ಲಾಹಿ ಅಲ್ಲಾಹು ಅಕ್ಬರ್"

ಮೇಲಿನಂತೆ ನಿಯ್ಯತ್ ಪಠಿಸಿ ಜುಬ್ಹಾ ಮಾಡಬೇಕು. ಮತ್ತು ಆ ನಂತರ ಹೀಗೆ ದುಆ ಪಠಿಸಬೇಕು:—

"ಅಲ್ಲಾಹುಮ್ಮಾ, ತಕಬ್ಬಲ್ ಮಿನ್ನಿ(ಅಥವಾ ಮಿನ್) ಕಮಾ ತಕಬ್ಬಲ್ತ ಮಿನ್ ಖಲೀಲಕ ಇಬ್ರಾಹೀಮ್, ವ ಹಬೀಬಕ ಮುಹಮ್ಮದರ್ರಸೂಲುಲ್ಲಾಹಿ ಸೊಲ್ಲಲ್ಲಾಹು ಅಲೈಹಿ ವ ಸೊಲ್ಲಮ್."

[ಟಿಪ್ಪಣಿ:— ಕುರ್ಬಾನಿ ಕೊಡತಕ್ಕವನು ಸ್ವತಃ ದುಆ ಪಠಿಸುವಾಗ, "ಮಿನ್ನೀ" ಅಂತಾ ಅನ್ನಬೇಕು; ಆದರೆ ಅವನ ಮತಿಯಿಂದ ಇತರರು ಪಠಿಸುವಾಗ, "ಮಿನ್" ಅಂತಾ ಅಂದ ನಂತರ ಕುರ್ಬಾನಿ ಕೊಡುವವನ ಹೆಸರನ್ನು ಪಠಿಸಬೇಕು. ಉದಾಹರಣಾರ್ಥವಾಗಿ, ಮಿನ್ ಅಬ್ದುಲ್ ರಹಿಮಾನ, ಮಿನ್ ಗುಲಾಮ ಮುಹಮ್ಮದ ವಗೈರೆ.]

ಕುರ್ಬಾನಿ ಕೊಡಲ್ಪಟ್ಟ ಪ್ರಾಣಿಯ ಮಾಂಸದಲ್ಲಿ ಮೂರು ಭಾಗಗಳನ್ನು ಮಾಡಿ, ಒಂದನ್ನು ದೀನದರಿದ್ರರಿಗೆ ದಾನವಾಗಿ ಕೊಡಬೇಕು; ಒಂದು ಭಾಗವನ್ನು ಆಪ್ತಮಿತ್ರರಿಗೆ ಹಂಚಬೇಕು; ಮತ್ತು ಒಂದು ಭಾಗವನ್ನು ಸ್ವಂತ ಉಪಯೋಗಕ್ಕಾಗಿ ಇಟ್ಟುಕೊಳ್ಳಬೇಕು. ಪ್ರಾಣಿಯ ಚರ್ಮವನ್ನು (ಅಥವಾ ಚರ್ಮವನ್ನು ಮಾರಿ ಅದರ ಬೆಲೆಯನ್ನು) ದೀನ ದರಿದ್ರರಿಗೆ ಅಥವಾ ಯಾವದಾದರೊಂದು ಧಾರ್ಮಿಕ ಸಂಸ್ಥೆಗೆ ದಾನವಾಗಿ ಕೊಡಬೇಕು.

## (೪) ಬಾಂಗ

ೄ:— "ಬಾಂಗ ಅಂದರೆ ಏನು ?

ಗುರು:— ಕೂಸು ಹುಟ್ಟಿದ ನಂತರ, ಸ್ವಚ್ಛವಾಗಿ ತೊಳುದು ಗುಸ್ಲ ಮಾಡಿಸಿ, ಮಡಿಯಾದ ವಸ್ತ್ರಗಳನ್ನು ಸುತ್ತಿದ ನಂತರ, ಆ ಕೂಸಿನ ಬಲಗಿವಿಯಲ್ಲಿ "ಅಜಾನ" ವನ್ನು ಮತ್ತು ಎಡಗಿವಿಯಲ್ಲಿ "ಅಕಾಮತ್"ವನ್ನು ಪಠಿಸುವದಕ್ಕೆ "ಬಾಂಗ" ಅನ್ನುತ್ತಾರೆ. ಹುಟ್ಟಿದ ಕೂಸಿಗೆ ಬಾಂಗ ಕೊಡಿಸಲೇಬೇಕು. "ಬಾಂಗ" ಪಠಿಸುವವನು ಕಾಬಾದ ದಿಕ್ಕಿನೆಡೆ ಮುಖವನ್ನು ಮಾಡಿ ಎದ್ದು ನಿಲ್ಲಬೇಕು. ಮತ್ತು ಕೂಸವನ್ನು ಅವನ ಮುಂದೆ ಅಡ್ಡಾಗಿ ಹಿಡಿಯಬೇಕು. ಮೊದಲು ಅಜಾನ್ ಪಠಿಸಿ ಬಲಗಿವಿಯಲ್ಲಿ ಊದಬೇಕು; ಆ ನಂತರ ಅಕಾಮತ್ ಪಠಿಸಿ ಎಡಗಿವಿಯಲ್ಲಿ ಊದಬೇಕು.

## (೫) ಅಕೀಕಾ

ಶಿಷ್ಯ:— "ಅಕೀಕಾ" ಅಂದರೆ ಏನು ?

ಗುರು:— ಕೂಸು ಹುಟ್ಟಿದ ನಂತರ, ಕೂಸು ಹುಟ್ಟಿದ ಸಂತೋಷಕ್ಕಾಗಿ ಒಂದು ಅಥವಾ ಎರಡು ಕುರಿಗಳನ್ನು ಜುಬ್ಹಾಮಾಡಿ, ಆಪ್ತ ಮಿತ್ರರಿಗೆ ಭೋಜನ ಸಮಾರಂಭ ನೆರವೇರಿಸುವದಕ್ಕೆ "ಅಕೀಕಾ" ಅನ್ನುತ್ತಾರೆ. ಗಂಡು ಕೂಸು ಹುಟ್ಟಿದರೆ ಎರಡು ಕುರಿಗಳನ್ನು ಮತ್ತು ಹೆಣ್ಣು ಕೂಸು ಹುಟ್ಟಿದರೆ ಒಂದು ಕುರಿಯನ್ನು "ಅಕೀಕಾ" ಮಾಡಬೇಕು. ಅಕೀಕಾದ ವಿಧಿಯನ್ನು ಕೂಸು ಹುಟ್ಟಿದ ಏಳನೇ, ಅಥವಾ ಹದಿನಾಲ್ಕನೇ, ಅಥವಾ ಇಪ್ಪತ್ತೊಂದನೇ, ಅಥವಾ ಇಪ್ಪತ್ತೆಂಟನೇ ದಿವಸ ಅಥವಾ ಏಳರಿಂದ ವಿಭಾಗಿಸಲ್ಪಡಬಲ್ಲ ಯಾವದೇ ದಿವಸ ಮಾಡಬೇಕು. ಕುರಿಯ ಮಾಂಸವನ್ನೆಲ್ಲ ಅಡಿಗೆ ಮಾಡಿಸಿ ಆಪ್ತಮಿತ್ರರಿಗೆ ಭೋಜನ ಮಾಡಿಸಬೇಕು; ಮತ್ತು ಕುರಿಯ ಚರ್ಮವನ್ನು ದಾನಮಾಡಬೇಕು.

ಅಕೀಕಾದ ವಿಧಿಯನ್ನು ನೆರವೇರಿಸುವ ದಿವಸ ಕೂಸಿನ ಜಡೆಯನ್ನು ಕತ್ತರಿಸಿ, ಕತ್ತರಿಸಿದ ಕೂದಲಿನ ತೂಕದಷ್ಟು ಬೆಳ್ಳಿ ಅಥವಾ ಬಂಗಾರವನ್ನು ಬಡಬಗ್ಗರಿಗೆ ದಾನ ಮಾಡಬೇಕು. ಕತ್ತರಿಸಿದ ಕೂದಲುಗಳನ್ನು ನೆಲದಲ್ಲಿ ಹೂಳಬೇಕು. ಕೂಸಿಗೆ ನಾಮಕರಣವನ್ನು ಮಾಡಬೇಕು.

ಅಕೀಕಾದ ಕುರಿಯನ್ನು ಅಥವಾ ಕುರಿಗಳನ್ನು ಜುಬ್ಹಾ ಮಾಡುವಾಗ ಹೀಗೆ ನಿಯ್ಯತ್ ಪಠಿಸಬೇಕು:—

"ಅಲ್ಲಾಹುಮ್ಮಾ ಹಾಜಿಹಿ ಅಕೀಕತು ಇಬ್ನಿ [ ಇಲ್ಲಿ ಕೂಸಿನ ಹೆಸರವನ್ನು ಪಠಿಸಬೇಕು ] ಬಿಸ್ಮಿಲ್ಲಾಹಿ ಅಲ್ಲಾಹು ಅಕ್ಬರ್."

ಶಿಷ್ಯ:— ಅಕೀಕಾದ ವಿಧಿಯನ್ನು ಎಲ್ಲರೂ ಮಾಡಬೇಕೆಂಬ ಬಂಧನ ವಿದೆಯೋ?

ಗುರು:— ಇಲ್ಲ. ಯಾರಿಗೆ ಶಕ್ಯವಿದೆಯೋ, ಅವರಷ್ಟೇ ಮಾಡಬೇಕು. ಅಕೀಕಾದ ಪದ್ಧತಿಯು ಹ|| ಮುಹಮ್ಮದ ಪೈಗಂಬರರಿಂದ ರೂಢಿಯಾಗಿ ಬಂದಿದೆ.

## (೬) ಖತನಾ

ಶಿಷ್ಯ:— "ಖತನಾ" ಅಂದರೆ ಏನು?

ಗುರು:— ಗಂಡಸರ ಮೂತ್ರಾಯವದ ಮುಂಭಾಗದ ಮೇಲಿರುವ ಚರ್ಮದ ಹೊದಿಕೆಯನ್ನು ಕತ್ತರಿಸಿ ತೆಗೆಯುವದಕ್ಕೆ "ಖತನಾ" ಅನ್ನುತ್ತಾರೆ. ಪ್ರತಿ ಮುಸಲ್ಮಾನನು ಖತನಾ ಮಾಡಿಸಿಕೊಳ್ಳಲೇಬೇಕೆಂದು "ಇಸ್ಲಾಮ್" ಧರ್ಮದ ಆದೇಶವಿರುತ್ತದೆ. ಬಾಲಕರು ಪ್ರೌಢಾವಸ್ಥೆಗೆ ಬರುವದಕ್ಕಿಂತ ಮೊದಲೇ ಖತನಾ ಮಾಡಿಸಬೇಕು. ಪ್ರೌಢನಾದ ಮುಸಲ್ಮಾನೇತನು ಇಸ್ಲಾಮ್ ಧರ್ಮವನ್ನು ಸ್ವೀಕರಿಸಿದ ನಂತರ ಖತನಾ ಮಾಡಿಸಿಕೊಳ್ಳಲೇಬೇಕು. ಖತನಾ ಮಾಡಿಸಿಕೊಳ್ಳುವದು ಹ|| ಇಬ್ರಾಹೀಮರಿಂದ ಅನುಕರಣೀಯವಾಗಿ ಬಂದಿದೆ (ಅಂದರೆ, ಸುನ್ನತೆ-ಇಬ್ರಾಹೀಮ್ ಆಗಿದೆ). ಮಕ್ಕಳ ಖತನಾ ಮಾಡಿಸುವಾಗ ಕೆಲವು ಅಜ್ಞ ಮುಸಲ್ಮಾನರು ಅನವಶ್ಯಕವಾದ ವಿಧಿಗಳನ್ನೂ ವ್ಯರ್ಥವಾದ ಖರ್ಚುಗಳನ್ನೂ ಮಾಡುತ್ತಾರೆ. ಹೀಗೆ ಮಾಡುವದು ಇಸ್ಲಾಮ್ ಧರ್ಮದ ನೇಮುಗಳಿಗೆ ಬಾಹಿರವಾದದ್ದಾಗಿವೆ. ಆದ್ದರಿಂದ ಖತನಾ ಮಾಡಿಸುವಾಗ ಅನವಶ್ಯಕವಾದ ದುಂದುಗಾರಿಕೆಯನ್ನು ಮಾಡಬಾರದು.

ಶಿಷ್ಯ:— ಖತನಾ ಮಾಡಿಸಿಕೊಳ್ಳುವದರಿಂದ ಬರುವ ಲಾಭವೇನು?

ಗುರು:— (೧) ಖತನಾ ಮಾಡಿಸಿಕೊಳ್ಳದಿದ್ದರೆ, ಮೂತ್ರಾಯುವದ ಮುಂಭಾಗದ ಮೇಲೆ ಆಚ್ಛಾದಿತವಾಗಿರುವ ಚರ್ಮದ ಹೊದಿಕೆಯ ಕೆಳಗೆ ಮೂತ್ರದ ಮತ್ತು ವೀರ್ಯದ ಕಣಗಳು ಹಾಗೆಯೇ ಉಳಿಯುವದರಿಂದ, ಆ ಭಾಗದಲ್ಲಿ ಚರ್ಮರೋಗಾದಿಗಳು ಉದ್ಭವಿಸುವ ಸಂಭವವು ಇರುತ್ತದೆ; ಆದರೆ, ಖತನಾ ಮಾಡಿಸಿಕೊಳ್ಳುವದರಿಂದ, ಇಂಥ ರೋಗಾದಿಗಳು ಉದ್ಭವಿಸುವದಕ್ಕೆ ಅವಕಾಶವು ಉಳಿಯುವದಿಲ್ಲ.

(೨) ಸ್ತ್ರೀ ಸಂಭೋಗ ಮಾಡುವಾಗ, ಗಂಡಸನ ಮೂತ್ರಾಯುವದ ಮುಂಭಾಗದ ಮೇಲೆ ಆಚ್ಛಾದಿತವಾಗಿರುವ ಚರ್ಮದ ಹೊದಿಕೆಯು ಒಮ್ಮೊಮ್ಮೆ ಹಿಂಬದಿಗೆ ಸರಿಯುತ್ತಿದೆಯಾದ್ದರಿಂದ, ಅದರಿಂದ ಗಂಡಸನಿಗೆ ವೇದನೆಯಾಗಹತ್ತಿ, ಸಂಭೋಗ ಕ್ರಿಯೆಯು ನಿರಾಂತಕವಾಗಿ ಸಾಗದಂತಾಗುತ್ತದೆ; ಆದರೆ, ಖತನಾ ಮಾಡಿಸಿಕೊಂಡರೆ ಹೀಗಾಗುವದು ಶಕ್ಯವಿಲ್ಲ.

(೩) ಸ್ತ್ರೀ-ಯೋನಿಯಿಂದ ಅಂಟಿಕೊಳ್ಳಬಹುದಾದ ಸುಂಕರೋಗಗಳಿಂದ, ಖತನಾ ಮಾಡಿಸಿಕೊಳ್ಳದವನ ಮೂತ್ರಾಯುವದ ಮುಂಭಾಗವು ಅತೀ ಬೇಗನೆ ಬಾಧಿತವಾಗುವದು ಮತ್ತು ಅಂಥ ಸುಂಕ ರೋಗವು ಒಮ್ಮೆ ಅಂಟಿಕೊಂಡಿತೆಂದರೆ, ಮೂತ್ರಾಯುವದ ಮುಂಭಾಗವು ಕೊಳೆತು ಹೋಗುವ ಸಂಭವವಿರುತ್ತದೆ. ಆದರೆ, ಖತನಾ ಮಾಡಿಸಿಕೊಂಡವನ ಮೂತ್ರಾಯುವದ ಮುಂಭಾಗವು ಅಷ್ಟು ಬೇಗನೆ ಬಾಧಿತವಾಗುವದಿಲ್ಲ; ಮತ್ತು ಅಂಥ ಸುಂಕ ರೋಗವು ಅಂಟಿಕೊಂಡರೂ ಸಹ ಮೂತ್ರಾಯುವದ ಮುಂಭಾಗವು ಕೊಳೆತು ಹೋಗುವ ಸಂಭವವಿರುವದಿಲ್ಲ.

## (೭) —ಷುಕ್ರಾನಾ—

ಶಿಷ್ಯ:—"ಷುಕ್ರಾನಾ" ಅಂದರೆ ಏನು ?

ಗುರು:—ಇಬ್ಬಣದ ಜನಗಳು ಕೂಡಿ, ಪ್ರತಿಷ್ಠಿತ ಜನಗಳ ಸಮ್ಮುಖದಲ್ಲಿ, ಒಂದು ಹೆಣ್ಣು ಮತ್ತು ಒಂದು ಗಂಡನ್ನು ವಧೂವರರನ್ನಾಗಿ ನಿಶ್ಚಯಿಸುವದಕ್ಕೆ "ಷುಕ್ರಾನಾ" ಅನ್ನುತ್ತಾರೆ.

ಶಿಷ್ಯ:—"ಷುಕ್ರಾನಾ" ವಿಧಿಯನ್ನು ಹೇಗೆ ಆಚರಿಸಬೇಕು ?

ಗುರು:—ಕನ್ಯಾ-ಪಕ್ಷದವರಿಗೆ ವರನು ಮತ್ತು ವರನ ಪಕ್ಷದವರಿಗೆ ಕನ್ಯೆಯು ಮಾನ್ಯರಾದ ನಂತರ, ವರನ ಪಕ್ಷದವರು "ಷುಕ್ರಾನಾ"ದ ಸಲುವಾಗಿ ಕನ್ಯಾ-ಪಕ್ಷದವರ ಮನೆಗೆ ಹೋಗಬೇಕು. ಎರಡೂ ಪಕ್ಷದವರು ಅಲ್ಲಿ ಕೆಲವು ಪ್ರಮುಖರ ಸಮ್ಮುಖದಲ್ಲಿ ಕೂಡಿ, ಕೊಡತಕ್ಕೊಳ್ಳುವ ವಿಷಯವಾಗಿ ಬಿಚ್ಚು ಮನಸ್ಸಿನಿಂದ ಮಾತಾಡಿ ನಿರ್ಣಯಕ್ಕೆ ಬರಬೇಕು.

ಆ ಮೇಲೆ ಕನ್ಯಾ-ಪಕ್ಷದವನು ಎದ್ದು ನಿಂತು ವರನ ತಂದೆಗೆ ಅಥವಾ ಪಾಲಕನಿಗೆ ಹೀಗೆ ಹೇಳಬೇಕು—

"ಅ"ನ ಮಗಳಾದ "ಬ" ಎಂಬ ಹೆಸರಿನವಳನ್ನು "ಕ"ನ ಮಗನಾದ "ಡ" ಎಂಬ ಹೆಸರಿನವನಿಗೆ, "ನಿಕಾಹ್" ಮಾಡಿಕೊಡಲು, ಇಲ್ಲಿ ಕುಳಿತಂಥ ಮಹಾಜನಗಳ ಸಮಕ್ಷಮದಲ್ಲಿ, ನಿಮಗೆ ವಚನವನ್ನೀಯುತ್ತೇನೆ. ಇದು ನಿಮಗೆ ಮಾನ್ಯವಿದೆಯೋ?"

ವರನ ತಂದೆಯು ಅಥವಾ ಪಾಲಕನು ಎದ್ದು ನಿಂತು, "ಇದು ನನಗೆ ಮಾನ್ಯವಿದೆ" ಅಂತಾ ಉತ್ತರಿಸಬೇಕು. ಆ ನಂತರ ಒಬ್ಬರಿನ್ನೊಬ್ಬರ ಬಾಯಲ್ಲಿ ಸಕ್ಕರೆ ಅಥವಾ ಮಿಠಾಯಿಯನ್ನು ಹಾಕಬೇಕು.

ಆ ನಂತರ, ಅಲ್ಲಿ ನೆರೆದಂಥ ಜನರೆಲ್ಲರೂ ಕೂಡಿ ಫಾತಿಹಾ ಪಠಿಸಬೇಕು. ಫಾತಿಹಾದಲ್ಲಿ ಮೊದಲು 'ಸೂರೆ-ಫಾತಿಹಾ'', ನಂತರ 'ಸೂರೆ-ನಸ್ರ' ತದನಂತರ "ದರೂದೆ-ಷರೀಫ್" ಪಠಿಸಿ, ನಂತರ ಫಾತಿಹಾ ಪೂರ್ಣಿಸಬೇಕು.

ಫಾತಿಹಾ ಪಠಿಸಿದ ನಂತರ, ಕೂಡಿದ ಜನರಿಗೆ ಮತ್ತು ಓಣಿಯವರಿಗೆ ಸಕ್ಕರೆ ಅಥವಾ ಮಿಠಾಯಿಯನ್ನು ಮತ್ತು ತಾಂಬೂಲವನ್ನು ಹಂಚಬೇಕು. ಶುಕ್ರಾನಾದ ಸಂದರ್ಭದಲ್ಲಿ ಅನವಶ್ಯಕವಾಗಿ ದುಂದುಗಾರಿಕೆಯನ್ನು ಮಾಡುವದು ಇಸ್ಲಾಮ್ ಧರ್ಮದ ನೇಮಗಳಿಗೆ ವಿರುದ್ಧವಾಗಿದೆ. ಅನವಶ್ಯಕವಾದ ಖರ್ಚು ಮಾಡುವದಕಿಂತ ಯಾವದಾದರೊಂದು ಧಾರ್ಮಿಕ ಸಂಸ್ಥೆಗೆ ಅಥವಾ ಮಶೀದೆಗೆ ದೇಣಿಗೆಗಳನ್ನು ಕೊಡುವದು ಹೆಚ್ಚು ಶ್ರೇಯಸ್ಕರವು.

ಶಿಷ್ಯ:—ಶುಕ್ರಾನಾದ ಸಂದರ್ಭದಲ್ಲಿ ವಧೂ-ವರರು ಹಾಜರ್ ಇರಲೇಬೇಕೇನು?

ಗುರು:—ಇಲ್ಲ, ಅವರು ಹಾಜರ್ ಇರಲೇಬೇಕೆಂಬ ನೇಮವಿಲ್ಲ. ಆದರೆ, ವಧೂವರರು ಪ್ರೌಢರಾದವರು ಇದ್ದದ್ದಾದರೆ, ಷುಕ್ರಾನಾದಕಿಂತ ಪೂರ್ವದಲ್ಲಿ ಅವರಿಬ್ಬರ ಒಪ್ಪಿಗೆಗಳನ್ನು ಪಡೆಯಲೇಬೇಕು.

## (೮) —ನಿಕಾಹ್—

ಶಿಷ್ಯ:—"ನಿಕಾಹ್" ಅಂದರೆ ಏನು ?

ಗುರು:—ವಧೂ-ವರರ ಪಕ್ಷದವರು, ಆಪ್ತೇಷ್ಟರು, ಮಿತ್ರರು ಮೊದಲಾದವರು ಒಟ್ಟಾಗಿ ಕೂಡಿ, ವಧೂವರರ ಒಪ್ಪಿಗೆಗಳನ್ನು ಪಡೆದು, ಧಾರ್ಮಿಕ ನೇಮಗಳಿಗೆ ಅನುಗುಣವಾಗಿ ಅವರಿಬ್ಬರನ್ನು ದಾಂಪತ್ಯ ಬಂಧನದಲ್ಲಿ ಬಿಗಿಯುವದಕ್ಕೆ "ನಿಕಾಹ್" (ಲಗ್ನ) ಅನ್ನುತ್ತಾರೆ. ಪ್ರೌಢನಾದ ನಂತರ ತನಗೆ ಶಕ್ಯವಾದಾಗ, ಪ್ರತಿ ಮುಸಲ್ಮಾನನು ಲಗ್ನವನ್ನು ಮಾಡಿಕೊಳ್ಳಲೇಬೇಕೆಂದು ಇಸ್ಲಾಮ್ ಧರ್ಮದ ಆದೇಶವಿದೆ. ಸಕಾರಣಗಳಿಲ್ಲದೆ ವಿನಾಕಾರಣವಾಗಿ ಲಗ್ನವನ್ನು ಮಾಡಿಕೊಳ್ಳದವನು, ಅಥವಾ ಆಜನ್ಮ ಅವಿವಾಹಿತನಾಗಿಯೇ ಇರಬಯಿಸುವವನು, ಇಸ್ಲಾಮ್ ಧರ್ಮದ ಆದೇಶವನ್ನು ಧಿ:ಕರಿಸಿದ ಪಾಪಕ್ಕೆ ಗುರಿಯಾಗುವನು. ಆದ್ದರಿಂದ ಪ್ರೌಢನಾದ ಪ್ರತಿ ಮುಸ್ಲಿಮನು ಅಥವಾ ಮುಸ್ಲಿಮಳು ಲಗ್ನವನ್ನು ಮಾಡಿಕೊಳ್ಳಲೇಬೇಕು.

ಶಿಷ್ಯ:—"ನಿಕಾಹ್"ದ ಪದ್ಧತಿಯನ್ನು ಸವಿಸ್ತಾರವಾಗಿ ವಿವರಿಸಿ ಹೇಳುವಿರಾ ?

ಗುರು:—(೧) ನಿಕಾಹ್‌ದ ಸಮಾರಂಭದಲ್ಲಿ ಎಲ್ಲಕ್ಕೂ ಮೊದಲಿನ ಕೆಲಸವೆಂದರೆ, ವರನು ವಧೂವಿಗೆ ಕೊಡಲೇಬೇಕಾದ "ಮಹರ್" (ವಾಗ್ದಾನ-ಧನ)ವನ್ನು ನಿರ್ಧರಿಸುವದಾಗಿದೆ. ಲಗ್ನವಾದ ನಂತರ, ಮುಂದೆ ದಂಪತಿಗಳಲ್ಲಿ ತಂಟೆಯುದ್ಭವಿಸಿದಾಗ, ಅಥವಾ ವಿವಾಹ-ವಿಚ್ಛೇದನೆಯ ಪ್ರಸಂಗವು ಒದಗಿದಾಗ, ಅಥವಾ ತನ್ನ ಯಾವದೇ ಕೆಲಸಕ್ಕಾಗಿ ಹೆಂಡತಿಗೆ ಹಣದ ಅವಶ್ಯಕತೆ ಉಂಟಾದಾಗ, ಲಗ್ನಕಾಲದಲ್ಲಿ ನಿರ್ಧರಿಸಲ್ಪಟ್ಟ ವಾಗ್ದಾನ-ಧನವನ್ನು ತನ್ನ ಗಂಡನಿಂದ ವಸೂಲಿ ಮಾಡುವ ಅಧಿಕಾರವು ಹೆಂಡತಿಗೆ ಇರುತ್ತದೆ; ಮತ್ತು ಹೆಂಡತಿಯು ಬೇಡಿದಾಗ, ವಾಗ್ದಾನ ಧನವನ್ನು ಗಂಡನು ಕೊಡಲೇಬೇಕಾಗುವದು. ಹೆಂಡತಿಯು ಬೇಡಲಿ ಅಥವಾ ಬೇಡದಿ

ರಲಿ, ತನ್ನ ಪುರಣಕ್ಕಿಂತ ಮುಂಚಿತವಾಗಿ ಈ ವಾಗ್ದಾನ-ಧನವನ್ನು ಗಂಡನು ಹೆಂಡತಿಗೆ ಕೊಡಲೇಬೇಕೆಂದು ಇಸ್ಲಾಮ್ ಧರ್ಮದ ನೇಮವಿದೆ. ಆದ್ದರಿಂದ, ವಾಗ್ದಾನ-ಧನದ ರಕಮುವನ್ನು ವಧೂವರರ ಒಪ್ಪಿಗೆಯಂತೆ ನಿರ್ಧರಿಸದಲೇ, ನಿಕಾಹ್ ಮಾಡಬಾರದು. ಈ ರಕಮನ್ನು ನಿರ್ಧರಿಸುವಾಗ ವರನ ಆರ್ಥಿಕ ಪರಿಸ್ಥಿತಿಯನ್ನು ನೋಡಿ ನಿರ್ಧರಿಸಬೇಕು. ವಧೂವರರು ಸ್ವತಃ ತಾವೇ ಚರ್ಚಿಸಿಯಾಗಲಿ, ಅಥವಾ ಒಬ್ಬ ವಕೀಲನ ಮುಖಾಂತರವಾಗಿಯಾಗಲಿ, ವಾಗ್ದಾನ-ಧನವನ್ನು ನಿರ್ಧರಿಸಿ, ಆ ನಿರ್ಧಾರವನ್ನು ಲಗ್ನ-ಸಮೂಹದ ಮುಂದೆ ಸಾರಬೇಕು.

(೨) ಆ ನಂತರ, ಇಬ್ಬರು ಸಾಕ್ಷಿದಾರರ ಸಮ್ಮುಖದಲ್ಲಿ, ವಧೂವರರು ಸ್ವತಃ ತಾವೇ ಆಗಲಿ ಅಥವಾ ಒಬ್ಬ ವಕೀಲನ ಮುಖಾಂತರವಾಗಿಯಾಗಲಿ ಒಬ್ಬರಿನ್ನೊಬ್ಬರಿಂದ ಲಗ್ನಕ್ಕೆಗಿ "ಕಬೂಲಿ ಜವಾಬ" ಪಡೆದುಕೊಳ್ಳಬೇಕು.

(೩) ತದನಂತರ, ನಿಕಾಹ್‌ದ ಸಮಾರಂಭವನ್ನು ನೆರವೇರಿಸುವವನು (ನಿಕಾಹ್-ಖ್ವಾನ್) ಎತ್ತರವಾದ ಧ್ವನಿಯಿಂದ ಎಲ್ಲರಿಗೂ ಕೇಳಿಸುವಂತೆ ಕೆಳಗಿನ ''ಖುತ್ಬಯೆ-ನಿಕಾಹ್'' (ಲಗ್ನದ ಪ್ರವಚನ)ವನ್ನು ಪಠಿಸಬೇಕು:—

''ಬಿಸ್ಮಿಲ್ಲಾ ಹಿರ್‍ರಹಿಮಾ ನಿರ್‍ರಹೀಮ್+ಅಲ್ ಹಮ್ದು ಲಿಲ್ಲಾಹಿ ವ ನ್ಹಮದುಹು ವ ನಸ್ತ ಯೀನಹು ವ ನಸ್ತಘ್ಫಿರುಹು, ವ ನಊಜು ಬಿಲ್ಲಾಹಿ ಮಿನ್ ಷುರೂರಿ ಅನ್ಫುಸಿನಾ, ವ ಮಿನ್ ಸಯ್ಯಿಆತಿ ಆಅಮಾಲಿನಾ, ಮೈಯ್ ಹ್ದಿಲ್ಲಾಹು ಫಲಾ ಮುದಿಲ್ಲ ಲಹು, ವಮೈ ಯುದ್ಲಿಲ್ಲಹು ಫಲಾ ಹಾದಿಯುಲಹ್+ವ ನಷ್ಹದು ಅಲ್ ಲಾ ಇಲಾಹಾ ಇಲ್ಲಲ್ಲಾಹು, ವ್ಹದಹು ಲಾ ಷರೀಕ ಲಹು, ವ ಅಷ್ಹದು ಅನ್ನ, ಮುಹಮ್ಮದನ್ ಅಬ್ದುಹೂ ವ ರಸೂಲುಹು; ಅರ್ಸಲವು ಬಿಲ್‌ಹಕ್ಕಿ ಬಯ್ಯಿನ, ಯುದಯ್ಯಿಸ್ಸಾಅತಿ ಬಷೀರವ್ ವ ನಝೀರಾ+ಮೈ ಯುತಿಯಿಲ್ಲಾಹು ವ ರಸೂಲಹು, ಫಕದ್ ರಷದ, ವ ಮೈಯಾ್ ಯುಅಸಿಹಿಮಾ; ಫ ಇನ್ನಹು ಲಾ ಯುಪುರ್‍ರು ಇಲ್ಲಾ ನಫ್ಸ; ವ ಲಾ ಯುಪುರ್‍ರುಹ ಷೈಯ್‌ಅ+ಯಾ ಅಯ್ಯುಹನ್ನಾಸುತ್ತಕೂ ರಬ್ಬಕುಮುಲ್ಲಜೀ ಖಲಕಕುಮ್ ಮ್ಮಿನ್ ನಫ್ಸಿಂವ್ ವಾಹಿದತಿಂವ್; ವ ಖಲಕ ಮಿನ್‌ಹಾ ಜಾಜಹಾ, ವ ಬಸ್ಸ ಮಿನ್‌ಹುಮಾ ರಿಜಾಲನ್ ಕಸೀರಂವ್ ವ ನಿಸಾಆ; ವತ್ತಕುಲ್ಲಾ ಹಲ್ಲಜೀ ತಸಾಅಲೂನಬಿಹಿ ವಲ್ ಅರ್ಹಾಮ್; ಇನ್ನಲ್ಲಾಹು ಕಾನ ಅಲೈಕುಮ್ ರಕೀಬಾ+ಯಾ ಅಯ್ಯುಹಲ್ಲಜೀನ ಆಮನುತ್ತಕುಲ್ಲಾಹ ಹಕ್ಕ ತುಕಾತಿಹಿ, ವ ಲಾ ತಮೂತುನ್ನ ಇಲ್ಲಾ ವ ಅಂತುಮ್ ಮುಸ್ಲಿಮೂನ್+ಯಾ ಅಯ್ಯುಹಲ್ಲಜೀನ ಆಮನುತ್ತಕುಲ್ಲಾಹ ವ

ಕೂಲೂ, ಕಾಲಸ್ ಸದೀದ ಯುಸ್ಲಿಹ್, ಲಕುಮ್ ಅಅಮಾಲಕುಮ್ ವಗ್ಫಿರ್ಲಕುಮ್ ಜುನೂಬುಕುಮ್; ವಮೈ ಯುತಿಯಿಲ್ಲಾಹ ವ ರಸೂಲಹು, ಫಕದ್ ಫೌಜ ಫೌಜನ್-ಅಝೀಮಾ+ಫ ನಸ್ಅಲುಲ್ಲಾಹ್ ಅಂಯ್ ಯಜಅಲ್ನಾ, ಮಿಮ್ಮೈ ಯುತಿವುಹು, ವ ಯುತಿವುರ್ರಸೂಲಹು ವ ಯತ್ತಬಿವೂ ವ ರಿದ್ವಾನಹು, ವ ಯಜ್ತನಿಬು ಸಖತಹು, ಫ ಇನ್ನಮಾ ನ್ಹನುಬಿಹಿ - ವಲಹು+ಅಲ್ಲಾಹುಮ್ಮ ಸೊಲ್ಲಿ, ಅಲಾ ಸಯ್ಯಿದಿನಾ ಮುಹಮ್ಮದಿನ್ ನಬೀಯುಲ್ ಉಮ್ಮೀ, ವ ಅಲಿಹಿ ವ ಅಸ್ಹಾಬಿಹಿ, ವ ಅಜ್ವಾಜಿಹಿ ವ ಜುರ್ರಿಯಾತಿಹಿ, ವ ಸೊಲ್ಲಮ್ ತಸ್ಲೀಮನ್ ಕಸೀರನ್ ಕಸೀರಾ+"

(೪) ಖುತ್ಬಾ ಪಠಿಸಿದ ನಂತರ ವಧೂ-ವರರಿಗೆ "ಅಸ್ತಫ್ಫಾರ್" ಮತ್ತು "ಸಿಫ್ತೆ—ಈಮಾನ್"ಗಳನ್ನು ಒಂದೊಂದು ಸಾರಿ ಪಠಿಸಬೇಕು—

**ಅಸ್ತೆಫ್ಫಾರ್:**—"ಅಸ್ತಫ್ಫಿರುಲ್ಲಾಹ್ ರಬ್ಬಿ, ಮಿನ್ ಕುಲ್ಲಿ ಜಂಬಿಂವ್ ವ ಖತಿಅತಿಂವ್, ವ ಅತೂಬು ಇಲೈಹ್"

**ಸಿಫ್ತೆ—ಈಮಾನ್:**—" ಆಮಂತು ಬಿಲ್ಲಾಹಿ ವ ಮಲಾಯಿಕತಿಹಿ ವ ಕುತುಬಿಹಿ ವ ರಸೂಲಿಹಿ ವಲ್ ಯೌಮಿಲ್ ಆಖಿರಿ, ವಲ್ ಕದ್ರಿ ಖೈರಿಹಿ ವ ಷರ್ರಿಹಿ ಮಿನಲ್ಲಾಹಿ ತಆಲಾ, ವಲ್ ಬಅಸಿ ಬಾದಲ್-ಮೌತ್+ ಆಮಂತು ಬಿಲ್ಲಾಹಿ, ಕಮಾಹುವ ಬಿ ಅಸ್ಮಾಯಿಹಿ ವ ಸಿಫಾತಿಹಿ, ವ ಕಬಿಲ್ತು ಜಮೀಅ ಅಹ್ಕಾಮಿಹಿ ವ ಅರ್ಕಾನಿಹಿ+ ಅಷ್ಹದು ಅಲ್ ಲಾ ಇಲಾಹಾ ಇಲ್ಲಲ್ಲಾಹು, ವಹ್ದಹು ಲಾ ಷರೀಕ ಲಹು, ವ ಅಷ್ಹದು ಅನ್ನ, ಮುಹಮ್ಮದನ್ ಅಬ್ದುಹೂ ವ ರಸೂಲುಹು"

(೫) ಆ ನಂತರ, ನಿಕಾಹ್ ಮಾಡಿಸುವವನು ಮದುಮಗನ ಬಲಗೈ ಹೆಬ್ಬೆರಳನ್ನು ತನ್ನ ಬಲಗೈ ಮುಷ್ಟಿಯಲ್ಲಿ ಹಿಡಿದು ಎಲ್ಲರಿಗೂ ಕೇಳಿಸುವಂತೆ ಮದುಮಗನಿಗೆ ಹೀಗೆ ಪ್ರಶ್ನೆ ಕೇಳಬೇಕು— "ವ" ನಾಮದ ವಕೀಲನ ಮಧ್ಯಸ್ಥಿಕೆಯಿಂದ "ಅ" ಮತ್ತು "ಬ" ಎಂಬ ಈ ಇಬ್ಬರು ಸಾಕ್ಷಿದಾರರ ಸಾಕ್ಷ್ಯಿಯಾಗಿ, ಇಲ್ಲಿ ಕುಳಿತಿರುವ ಮಹಾಜನಗಳ ಸಮ್ಮುಖದಲ್ಲಿ, ಪರಮಾತ್ಮನು ಇಲ್ಲಿ ಹಾಜರ್ ಇದ್ದಾನೆ ಮತ್ತು ನೋಡುತ್ತಲಿದ್ದಾನೆ ಎಂಬುವದನ್ನು ಲಕ್ಷಿಸುತ್ತ, ಇಂತಿಷ್ಟು "ವಾಗ್ದಾನ-ಧನ"ದ ಕರಾರಿನಿಂದ "ಕ"ನ ಮಗಳಾದ "ಡ" ಎಂಬವಳನ್ನು ನಿನಗೆ ನಿಕಾಹ್ ಮಾಡಿ ಕೊಡತ್ತಲಿದ್ದೇನೆ. ಇದಕ್ಕೆ ನಿನ್ನ ಒಪ್ಪಿಗೆ ಇದೆಯೋ ?" ಪ್ರಶ್ನೆಗೆ ಮದುಮಗನು, "ಅಹುದು, ಇದಕ್ಕೆ ನನ್ನ ಒಪ್ಪಿಗೆ ಇದೆ" ಅಂತಾ ಉತ್ತರಿಸಬೇಕು. ಇದೇ ಪ್ರಕಾರವಾಗಿ ಮೂರು ಸಾರೆ ಪ್ರಶ್ನೋತ್ತರಗಳಾಗಬೇಕು.

ಆ ನಂತರ ನಿಕಾಹ್ ಮಾಡಿಸುವವನು ಮದುಮಗನಿಗೆ ಮತ್ತೆ ಹೀಗೆ ಪ್ರಶ್ನೆ ಕೇಳಬೇಕು— "ಈ ವಕೀಲನ ಮಧ್ಯಸ್ಥಿಕೆಯಿಂದ ಮತ್ತು ಈ ಇಬ್ಬರು ಸಾಕ್ಷಿದಾರರ ಸಾಕ್ಷಿಯಾಗಿ ನಿರ್ಧರಿಸಲ್ಪಟ್ಟ ವಾಗ್ದಾನ-ಧನವನ್ನು, ನಿನ್ನ ಹೆಂಡತಿಯು ಬೇಡಿದಾಗ ಕೊಡಲು ಕಬೂಲ ಮಾಡುತ್ತೀಯಾ ? ಮತ್ತು ನಿನ್ನ ಹೆಂಡತಿಯ ಪತ್ನಿಯತ್ವದ ಹಕ್ಕುಗಳನ್ನು ಮನ್ನಿಸಲು, ಮತ್ತು ಅವಳಿಗೆ ಅನ್ನ ವಸ್ತ್ರಗಳನ್ನೊದಗಿಸುವ ಜವಾಬ್ದಾರಿಯನ್ನು ಹೊರಲು ನೀನು ಕಬೂಲ ಮಾಡುತ್ತೀಯಾ" ಪ್ರಶ್ನೆಗೆ ಮದುಮಗನು, "ಅಹುದು, ನಾನು ಕಬೂಲ ಮಾಡುತ್ತೇನೆ" ಅಂತಾ ಉತ್ತರಿಸಬೇಕು. ಮೂರು ಸಾರೆ ಈ ಪ್ರಶ್ನೋತ್ತರಗಳಾಗಬೇಕು.

(೬) ತದನಂತರ, ಮದುಮಗನು ಹೀಗೆ ಪಠಿಸಬೇಕು.
"ಕಬಿಲ್ತು ಜಮೀಅ ಥ್ಥಕಾಮಿಹಿ ವ ಅರ್ಕಾಸಿಹಿ ಹಕ್ಕುನ್ ಸಿದಕುನ್ ಥ್ಥದಿಲ್ಲಾ"

(೭) ತದನಂತರ ನಿಕಾಹ್ ಮಾಡಿಸುವವನು, "ನಿಯ್ಯತ್ ಖೈರ್ ಅಲ್-ಫಾತಿಹಾ" ಅಂತಾ ಅನ್ನಬೇಕು; ಮತ್ತು ಹಾಜರ್ ಇದ್ದವರೆಲ್ಲರೂ ಹೀಗೆ ಫಾತಿಹಾ ಪಠಿಸಬೇಕು—

"ಬಿಸ್ಮಿಲ್ಲಾ ಹಿರ್ರಹಿಮಾ ನಿರ್ರಹೀಮ್+ಅಲ್‌ಹಮ್ದು ಲಿಲ್ಲಾಹಿ ರಬ್ಬಿಲ, ಆಲಮಿನ್, ಅರ್ರಹಮಾ ನಿರ್ರಹೀಮಿ, ಮಾಲಿಕಿ ಯೌಮಿದ್ದೀನ್+ಇಯ್ಯಾಕ ನಅಬುದು ವ ಇಯಾಕ ನಸ್ತ ಯೀನ್+ಯ್ಥದಿನಸ್ಸಿರಾತೊಲ್ ಮುಸ್ತಕೀಮಾ ಸಿರಾತೊಲ್ಲಜೀನ ಅನ್‌ಅಮ್ತ ಅಲೈಹಿಮ್, ಗೈರಿಲ್ ಮಗ್ದೂಬಿ ಅಲೈಹಿಮ್ ವಲದ್‌ದ್ವಾಲ್ಲೀನ್'+ ಬಿಸ್ಮಿಲ್ಲಾ ಹಿರ್ರಹಿಮಾ ನಿರ್ರಹೀಮ್+ಇಜಾ ಜಾ....ಅ ನಸ್ರುಲ್ಲಾಹಿ ವಲ್ ಫತ್‌ಹು, ವ ಅರಐತನ್ನಾಸ ಯದ್‌ಖುಲೂನ ಫೀ ದೀನಿಲ್ಲಾಹಿ ಅಫ್ವಾಜನ್; ಫ ಸಬ್ಬಿಹ್ ಬಿಹಮ್ದಿ ರಬ್ಬಿಕ ವಸ್ತಘ್ಫಿರ್; ಇನ್ನಹು ಕಾನ ತವ್ವಾಬಾ+ ಅಲ್ಲಾಹುಮ್ಮಾ ಸೊಲ್ಲೆ ಅಲ್ಲಾ ಸಯ್ಯದಿನಾ ಮುಹಮ್ಮದಿಂವ್, ವ ಅಲಾ ಆಲಿ ಸಯ್ಯದಿನಾ ಮುಹಮ್ಮದಿಂವ್, ವಬಾರಕ ಸೊಲ್ಲಮ್ ಸೊಲ್ಲು ಅಲೈಹ್"

ಇದಾದನಂತರ ನಿಕಾಹ್ ಮಾಡಿಸುವವನು ಕೆಳಗಿನ "ದುಆ" ಪಠಿಸ ಬೇಕು ಮತ್ತು ಉಳಿದವರು ಆಗಾಗ್ಗೆ "ಆಮೀನ್, ಆಮೀನ್" ಅಂತಾ ಅನ್ನ ಬೇಕು—

—"ದುಆ"—

"ಅಲ್ಲಾಹುಮ್ಮಾ, ಅಲ್ಲಿಫ್ ಬೈನಹುಮಾ ಕಮಾ ಅಲ್ಲಫ್ತ, ಬೈನ ಆದಮ ವ ಹವ್ವಾ ಅಲೈಹಿಮುಸ್ಸಲಾಮ್+ಅಲ್ಲಾಹುಮ್ಮಾ, ಅಲ್ಲಿಫ್ ಬೈನಹುಮಾ ಕಮಾ ಅಲ್ಲಫ್ತ, ಬೈನ ಇಬ್ರಾಹೀಮ ವ ಸಾರಾಹ್ ಅಲೈಹಿಮುಸ್ಸಲಾಮ್+ಅಲ್ಲಾಹುಮ್ಮಾ, ಅಲ್ಲಿಫ್ ಬೈನಹುಮಾ ಕಮಾ ಅಲ್ಲಫ್ತ, ಬೈನ ಯೂಸುಫ ವ ಜುಲೈಖಾ ಅಲೈಹಿಮುಸ್ಸಲಾಮ್+ ಅಲ್ಲಾಹುಮ್ಮಾ, ಅಲ್ಲಿಫ್ ಬೈನಹುಮಾ ಕಮಾಅಲ್ಲಫ್ತ, ಬೈನಮೂಸಾ ವ ಸಫೂರಾ ಅ|| ಅಲ್ಲಾಹುಮ್ಮಾ, ಅಲ್ಲಿಫ್ ಬೈನಹುಮಾ ಕಮಾ ಅಲ್ಲಫ್ತ, ಬೈನ ಸುಲೇಮಾನ ವ ಬಿಲ್ಕಿಸ್ ಅಲೈಹಿಮುಸ್ಸಲಾಮ್+ಅಲ್ಲಾಹುಮ್ಮಾ ಅಲ್ಲಿಫ್ ಬೈನಹುಮಾ ಕಮಾ ಅಲ್ಲಫ್ತ, ಬೈನ ಹಜರತ್ ಮುಹಮ್ಮದುರ್ ರಸೂಲುಲ್ಲಾಹಿ ಸೊಲ್ಲಲ್ಲಾಹು ಅಲೈಹಿ ವ ಸೊಲ್ಲಮ್, ವ ಖದೀಜತುಲ್ ಕುಬ್ರಾ, ವ ಆಯಿಷಾ ಸಿದ್ದೀಕ ರದಿ-ಅಲ್ಲಾಹು ತಆಲಾ ಅನ್‌ಹುಮಾ+ಅಲ್ಲಾಹುಮ್ಮಾ, ಅಲ್ಲಿಫ್ ಬೈನಹುಮಾ ಕಮಾ ಅಲ್ಲಫ್ತ, ಬೈನ ಆಲಿಯಿಲ್ ಮುರ್ತುಜಾ, ವ ಫಾತಿಮತುಜ್ಜೊಹರಾ ರದಿಅಲ್ಲಾಹು ತಆಲಾ ಅನ್‌ಹುಮಾ+ಇನ್ನಹೂ ತಆಲಾ ಜವಾದುನ್ ಕರೀಮುನ್, ರವೂಫುರ್ರಹೀಮುನ್ ವ ರಬ್ಬುನ್ ಹಲೀಮ್+ಸುಬ್ಹಾನ ರಬ್ಬಿಕ, ರಬ್ಬುಲ್-ಇಜ್ಜತಿ ಅಮ್ಮಾ ಯಸಿಫೂನ್, ವ ಸಲಾಮುನ್ ಅಲಲ್ ಮುರ್ಸಲೀನ್, ವಲ್‌ಹಮ್ದು ಲಿಲ್ಲಾಹಿ ರಬ್ಬಿಲ್ ಆಲಮಿನ್+"

(ಲ) ಆ ನಂತರ ಕಲ್ಲುಸಕ್ಕರೆ ಉತ್ತತ್ತಿ ಬಾದಾಮುಗಳನ್ನು ಮದುಮಗನ ಮೇಲೆ ಮತ್ತು ಸುತ್ತಾಕಡೆಗೆ ಹಾರಿಸಬೇಕು. ಇಲ್ಲಿಗೆ **ಲಗ್ನ ಸಮಾರಂಭವು ಸಮಾಪ್ತವಾದಂತಾಯಿತು.**

ಲಗ್ನ ಸಮಾರಂಭವು ಮುಗಿಯುತ್ತಲೇ, ಮದುಮಗನು ಎದ್ದು ನಿಂತು, "ಅಸ್ಸಲಾಮು ಅಲೈಕುಮ್" ಅಂತಾ ಅನ್ನುತ್ತ ಎಲ್ಲರಿಗೂ ಸಲಾಮ್ ಮಾಡಿ, ಎಲ್ಲರ ಕೂಡ ಕೈಕುಲುಕಿಸಬೇಕು.

ಲಗ್ನ ಸಮಾರಂಭವು ಮುಗಿದ ನಂತರ ಕನ್ಯಾ ಪಕ್ಷದವರು ಆಪ್ತ ಮಿತ್ರರಿಗೆ ಮತ್ತು ಅತಿಥಿಗಳಿಗೆ ಭೋಜನ ಸಮಾರಂಭವನ್ನು ಏರ್ಪಡಿಸಬೇಕು. ಮುಸಲ್ಮಾನರಲ್ಲಿ ಲಗ್ನ ಸಮಾರಂಭವು ಕನ್ಯಾಪಕ್ಷದವರ ಮನೆಯಲ್ಲಿ ನಡೆಯುತ್ತದೆ. ಲಗ್ನವಾದ ಮರುದಿವಸ ಅಥವಾ ತಮಗೆ ಅನುಕೂಲವಾದಾಗ, ಮದುಮಗನ ಪಕ್ಷದವರು ತಮ್ಮ ಮನೆಯಲ್ಲಿ ತಮ್ಮ ಶಕ್ತ್ಯಾನುಸಾರವಾಗಿ ಆಪ್ತ ಮಿತ್ರರಿಗೆ ಭೋಜನ ಸಮಾರಂಭವನ್ನು ಏರ್ಪಡಿಸಬೇಕು.

ಇವಕ್ಕೆ "ದಾವತೆ-ವಲೀಮಾ" ಅನ್ನುತ್ತಾರೆ. ಈ ಭೋಜನ ಸಮಾರಂಭಕ್ಕೆ ಔತನಿಸಲ್ಪಟ್ಟವರು ಅವಶ್ಯವಾಗಿ ಹೋಗಲೇಬೇಕು ಮತ್ತು ಮದುಮಗನಿಗೆ ಅಭಿನಂದನೆಗಳನ್ನು (ಮುಬಾರಕಬಾದ) ಅರ್ಪಿಸಬೇಕು.

ಶಿಷ್ಯ:—ನಿಕಾಹ್ ಸಮಾರಂಭದಕಿಂತ ಮೊದಲು ವಧೂವರರು ಏನೇನು ಮಾಡಬೇಕಾಗುತ್ತದೆ ಎಂಬುದನ್ನು ತಿಳಿಸುವಿರಾ ?

ಗುರು:—ನಿಕಾಹ್ ಸಮಾರಂಭದಕಿಂತ ಮೊದಲು ವಧೂವರರು ಏನೇನು ಮಾಡಬೇಕಾಗುತ್ತದೆಯೆಂದರೆ:—

(೧) ನಿಕಾಹ್ ಸಮಾರಂಭದಕಿಂತ ಮೊದಲು ವಧುವು ಗುಸ್ಲ ಮಾಡಿ, ವರನು ಕೊಟ್ಟಂಥ ಅಥವಾ ತನ್ನಲ್ಲಿಯ ವಸ್ತ್ರಾಭರಣಗಳನ್ನು ಧರಿಸಿ, ಲಗ್ನ ಸಮಾರಂಭಕ್ಕಾಗಿ ಕೂಡಿದ ಹೆಂಗಸರ ಮಧ್ಯದಲ್ಲಿ ಕಾಬಾ ದಿಕ್ಕಿನೆಡೆಗೆ ಮುಖವನ್ನು ಮಾಡಿ ಕುಳಿತುಕೊಳ್ಳಬೇಕು.

(೨) ವರನು ಗುಸ್ಲ ಮಾಡಿ ತನ್ನ ಶಕ್ತ್ಯಾನುಸಾರವಾಗಿ ಉತ್ತಮವಾದ ವಸ್ತ್ರಾಭರಣಗಳನ್ನು ತೊಟ್ಟು, ಕುದುರೆಯ ಮೇಲೆ ಅಥವಾ ಟಾಂಗಾದಲ್ಲಿ ಅಥವಾ ಮೋಟಾರಿನಲ್ಲಿ ಕುಳಿತು, ಇಲ್ಲವೆ ಕಾಲ್ನಡಿಗೆಯಿಂದ ನಡೆಯುತ್ತ, ತನ್ನ ಆಪ್ತರು ಮಿತ್ರರನ್ನು ಕೂಡಿಕೊಂಡು ಮಶೀದೆಗೆ ಹೋಗಬೇಕು. ಮಶೀದೆಯಲ್ಲಿ "ಎರಡು ರಕಾತಗಳ ನಫೀಲ್ ನಮಾಜ" ಮಾಡಬೇಕು. ಈ ನಮಾಜಕ್ಕೆ "ನಮಾಜೆ-ಷುಕ್ರಾನಾ" (ಧನ್ಯವಾದದ-ಪ್ರಾರ್ಥನೆ) ಅನ್ನುತ್ತಾರೆ. ನಮಾಜವು ಮುಗಿದ ನಂತರ ಸಂಗಡಿಗರನ್ನು ಕೂಡಿಕೊಂಡು ಲಗ್ನ ಸಮಾರಂಭದ ಸ್ಥಳಕ್ಕೆ ಬಂದು, ಲಗ್ನ ಸಮೂಹದ ಮಧ್ಯದಲ್ಲಿ ಕಾಬಾದ ದಿಕ್ಕಿನೆಡೆ ಮುಖವನ್ನು ಮಾಡಿ ಕುಳಿತುಕೊಳ್ಳಬೇಕು. ಕುಳಿತುಕೊಂಡಾಗ, ಬಲಗಾಲ ಪಾದವನ್ನು ನೆಲಕ್ಕೆ ಊರಿ, ಎಡಗಾಲವನ್ನು ನೆಲದ ಮೇಲೆ ಮಡಿಚಿ, ಎಡಪಾದವನ್ನು ಅಡ್ಡಾಗಿ ಇಟ್ಟು, ಎಡಪಾದದ ಮೇಲೆ ಕೂಡ್ರಬೇಕು.

ಶಿಷ್ಯ:—ಮದುಮಗನು ತನ್ನ ಸ್ಥಳದಿಂದ ಮಶೀದೆಯ ಮಾರ್ಗವಾಗಿ ಹಾಯ್ದು ಲಗ್ನ ಸಮಾರಂಭದ ಸ್ಥಳಕ್ಕೆ ಹೋಗುವಾಗ, ಊದುತ್ತ ಬಾರಿಸುತ್ತ

ಮತ್ತು ಮದ್ದು ಗುಂಡುಗಳನ್ನು ಹಾರಿಸುತ್ತ ಷಡಗರದಿಂದ ಹೋಗಬೇಕೋ ಅಥವಾ ಸಾದಾ ರೀತಿಯಾಗಿಯೇ ಹೋಗಬೇಕೋ ?

ಗುರು:—ಸಾದಾ ರೀತಿಯಾಗಿಯೇ ಹೋಗಬೇಕು. ಯಾಕೆಂದರೆ, ಲಗ್ನ ಸಮಾರಂಭವನ್ನು ಆವಷ್ಟು ಸಾದಾ ರೀತಿಯಿಂದಲೇ ನೆರವೇರಿಸಬೇಕೆಂದು ಇಸ್ಲಾಮ್ ಧರ್ಮದ ನೇಮವಿದೆ. ಢೋಂಡು, ಬಾಜಾ, ಮದ್ದುಗಳಿಗಾಗಿ ಅನವಶ್ಯಕವಾಗಿ ಹಣವನ್ನು ಖರ್ಚು ಮಾಡದಲೆ, ಯಾವದಾದರೊಂದು ಧಾರ್ಮಿಕ ಸಂಸ್ಥೆಗೆ ಅಥವಾ ಮಶೀದೆಗೆ ತಮ್ಮ ಶಕ್ತ್ಯಾನುಸಾರವಾಗಿ ದೇಣಿಗೆಗಳನ್ನು ಕೊಡುವದು ಹೆಚ್ಚು ಶ್ರೇಯಸ್ಕರವು.

ಶಿಷ್ಯ:—ಇಸ್ಲಾಮ್ ಧರ್ಮದ ನೇಮಗಳಂತೆ ಯಾವ ಯಾವ ಹೆಂಗಸರನ್ನು ನಿಕಾಹ್ ಮಾಡಿಕೊಳ್ಳಲು ಬರುವದಿಲ್ಲ ?

ಗುರು:—ಕೆಳಗೆ ತೋರಿಸಿದಂಥ ಹೆಂಗಸರನ್ನು ನಿಕಾಹ್ ಮಾಡಿಕೊಳ್ಳಲು ಬರುವದಿಲ್ಲ:-

(ಅ) (೧) ತಾಯಿಯನ್ನು; ತಂದೆಯ ಹೆಂಡತಿಯನ್ನು; ತನಗೆ ಮೊಲೆ ಹಾಲು ಕುಡಿಸಿದಂಥವಳನ್ನು (ದಾಯೀ)

(೨) ತಾಯಿಯ ತಾಯಿಯನ್ನು (ನಾನಿ); ತಂದೆಯ ತಾಯಿಯನ್ನು (ದಾದಿ), ತನಗೆ ಹಾಲುಕುಡಿಸಿದವಳ ತಾಯಿಯನ್ನು; ಹೆಂಡತಿಯ ತಾಯಿಯನ್ನು (ಸಾಸ)

(೩) ತಂದೆಯ ಅಕ್ಕ ತಂಗಿಯರನ್ನು (ಫುಫ್ಫಿ); ತಾಯಿಯ ಅಕ್ಕ ತಂಗಿಯರನ್ನು (ಖಾಲಾ); ತನಗೆ ಮೊಲೆ ಹಾಲು ಕುಡಿಸಿದವಳ ಅಕ್ಕ ತಂಗಿಯರನ್ನು.

(ಬ) ಅಕ್ಕ ತಂಗಿಯರನ್ನು; ತನಗೆ ಮೊಲೆ ಹಾಲು ಕುಡಿಸಿದವಳ ಮಗಳನ್ನು; ಹೆಂಡತಿಯು ಜೀವಂತಿರುವಾಗ, ಅವಳ ಅಕ್ಕ ತಂಗಿಯರನ್ನು.

(ಕ) ತನ್ನ ಮಗಳನ್ನು; ಅಕ್ಕ ತಂಗಿಯರ ಮಗಳನ್ನು; ಅಣ್ಣ ತಮ್ಮಂದಿರ ಮಗಳನ್ನು; ತನ್ನ ಮಗನ ಹೆಂಡತಿಯನ್ನು; ಮತ್ತು ಇವರೆಲ್ಲರಿಂದ ಉತ್ಪತ್ತಿಯಾದ ಮಕ್ಕಳನ್ನು.

(ಡ) "ಅಹಲಿ-ಕಿತಾಬ್" ಅಲ್ಲದಂಥ ಸ್ತ್ರೀಯಳನ್ನು, ಅಂದರೆ, ಕ್ರಿಶ್ಚನ್ ಯಹೂದಿ ಮುಸ್ಲಿಮ್ ಧರ್ಮಗಳ ಹೊರ್ತಾಗಿ ಇತರ ಧರ್ಮದ ಸ್ತ್ರೀಯಳನ್ನು.

ಮೇಲೆ ಕಾಣಿಸಿದ ಸ್ತ್ರೀಯರ ಹೊರ್ತಾಗಿ, ತನಗೆ ಯೋಗ್ಯವೆನಿಸಿದ ಯಾವದೇ ಸ್ತ್ರೀಯಳ ಕೂಡ ನಿಕಾಹ್ ಮಾಡಿಕೊಳ್ಳಲಿಕ್ಕೆ ಬರುತ್ತದೆ.

ಶಿಷ್ಯ:—ಇಸ್ಲಾಮ್ ಧರ್ಮದ ನೇಮಗಳಂತೆ, ಒಬ್ಬ ಸ್ತ್ರೀಯು ಏಕ ಕಾಲಕ್ಕೆ ಎಷ್ಟು ಗಂಡಂದಿರನ್ನು ಮಾಡಿಕೊಳ್ಳಬಲ್ಲಳು ?

ಗುರು:—ಇಸ್ಲಾಮ್ ಧರ್ಮದ ನೇಮಗಳಂತೆ ಒಬ್ಬ ಸ್ತ್ರೀಯಳು ಏಕ ಕಾಲಕ್ಕೆ ಒಬ್ಬನೇ ಗಂಡನನ್ನು ಮಾಡಿಕೊಳ್ಳಬಲ್ಲಳು. ಗಂಡನು ಜೀವಂತಿರಲಿಕ್ಕಾಗಿ ಎರಡನೇ ಲಗ್ನವನ್ನು ಮಾಡಿಕೊಳ್ಳುವ ಅಧಿಕಾರವು ಸ್ತ್ರೀಯಳಿಗೆ ಇರುವದಿಲ್ಲ.

ಶಿಷ್ಯ:—ಗಂಡನು ತೀರಿಕೊಂಡ ನಂತರ, ಪುನರ್ವಿವಾಹವನ್ನು ಮಾಡಿಕೊಳ್ಳುವ ಅಧಿಕಾರವು ಸ್ತ್ರೀಯಳಿಗೆ ಇರುತ್ತದೆಯೋ ?

ಗುರು:—ಅಹುದು, ಇರುತ್ತದೆ.

ಶಿಷ್ಯ:—ಹೆಂಗಸರ ಪುನರ್ವಿವಾಹಕ್ಕೆ ಅಥವಾ ವಿಧವಾ ವಿವಾಹಕ್ಕೆ "ಉಡಿಕೆ" ಅಂತಾ ಅನ್ನುವರೋ ಅಥವಾ ಮತ್ತಾವದೇ ಹೆಸರಿರುತ್ತದೆಯೋ?

ಗುರು:—"ಉಡಿಕೆ, ಗಿಡಿಕೆ" ಎಂಬುವದನ್ನು ಇಸ್ಲಾಮ್ ಧರ್ಮವು ಮನ್ನಿಸುವದಿಲ್ಲ. ಕುಮಾರಿ-ವಿವಾಹ ಮತ್ತು ವಿಧವಾ-ವಿವಾಹ ಎರಡೂ ಅಷ್ಟೇ ಪವಿತ್ರವಾದವುಗಳು ಇರುತ್ತವೆ ಎಂದು ಇಸ್ಲಾಮ್ ಧರ್ಮವು ಸಾರುತ್ತದೆ. ಎರಡೂ ತರದ ಲಗ್ನಗಳಿಗೆ ನಿಕಾಹ್ ಅನ್ನುತ್ತಾರೆ. ನಿಕಾಹ್ ಮಾಡಿಕೊಂಡ ನಂತರ ಕುಮಾರಿಯು ಹೇಗೆ ಸುಮಂಗಲೆಯಾಗುವಳೋ, ಅದೇ ರೀತಿಯಾಗಿ ಪುನರ್-ನಿಕಾಹ್ ಮಾಡಿಕೊಂಡ ನಂತರ ವಿಧವೆಯು ಸಹ ಸುಮಂಗಲೆಯಾಗುವಳು. ಆದ್ದರಿಂದ, ಕುಮಾರಿ-ವಿವಾಹ ಮತ್ತು ವಿಧವಾ-ವಿವಾಹಗಳಲ್ಲಿ ಭೇದವನ್ನೆಣಿಸಿದರೆ, ಇಸ್ಲಾಮ್ ಧರ್ಮದ ಆದೇಶವನ್ನು ಧಿಃಕರಿಸಿದ ಪಾಪಕ್ಕೆ ಗುರಿಯಾಗಬೇಕಾಗುವದು.

ಶಿಷ್ಯ:— ಇಸ್ಲಾಮ್ ಧರ್ಮದ ನೇಮಗಳಂತೆ, ಒಬ್ಬ ಪುರುಷನು ಏಕ ಕಾಲಕ್ಕೆ ಎಷ್ಟು ಹೆಂಡಂದಿರನ್ನು ಲಗ್ನ ಮಾಡಿಕೊಳ್ಳಬಲ್ಲನು ?

ಗುರು:— ಒಬ್ಬ ಪುರುಷನು ಏಕ ಕಾಲಕ್ಕೆ ಒಬ್ಬಳೇ ಹೆಂಡತಿಯನ್ನು ಮಾಡಿಕೊಳ್ಳಬೇಕೆಂದು ಇಸ್ಲಾಮ್ ಧರ್ಮವು ಅಪೇಕ್ಷಿಸುತ್ತದೆ; ಆದರೆ, ಅನಿವಾರ್ಯ ಪ್ರಸಂಗಗಳು ಉಪಸ್ಥಿತವಾದರೆ, ಮತ್ತು ಒಬ್ಬಳಕ್ಕಿಂತ ಹೆಚ್ಚು ಹೆಂಡಂದಿರನ್ನು ಆಳುವ ತನ ಧನಗಳ ಸಾಮರ್ಥ್ಯ ಪುರುಷನಲ್ಲಿ ಇದ್ದದ್ದಾದರೆ ಮಾತ್ರ, ತನ್ನ ಹೆಂಡತಿಯ (ಅಥವಾ ಹೆಂಡಂದಿರ) ಅನುಮತಿಯನ್ನು ಪಡೆದು, ನಾಲ್ಕರ ವರೆಗೆ ಹೆಂಡಂದಿರನ್ನು ಮಾಡಿಕೊಳ್ಳಲು ಇಸ್ಲಾಮ್ ಧರ್ಮವು ಅನುಮತಿಯನ್ನೀಯುತ್ತದೆ. ಎಂಥ ಪ್ರಸಂಗವಿದ್ದರೂ ಸಹ, ನಾಲ್ಕರಕ್ಕಿಂತ ಹೆಚ್ಚು ಹೆಂಡಂದಿರನ್ನು ಮಾಡಿಕೊಳ್ಳಲಿಕ್ಕೆ ಬರುವದಿಲ್ಲ; ಅಂದರೆ, ನಾಲ್ಕು ಹೆಂಡಂದಿರು ಜೀವಂತರಾಗಿ ಇದ್ದದ್ದಾದರೆ,ಐದನೇ ಲಗ್ನವನ್ನು ಮಾಡಿಕೊಳ್ಳಲಿಕ್ಕೆ ಬರುವದಿಲ್ಲ.

ಶಿಷ್ಯ:— ಜೀವಂತರಾಗಿದ್ದ ನಾಲ್ವರು ಹೆಂಡಂದಿರಲ್ಲಿಯ ಒಬ್ಬಳು ತೀರಿಕೊಂಡ ನಂತರ, ಮತ್ತೊಂದು ಲಗ್ನವನ್ನು ಮಾಡಿಕೊಳ್ಳಲೇಬೇಕಾದ ಅನಿವಾರ್ಯ ಪ್ರಸಂಗವು ಬಂದದ್ದಾದರೆ, ಹಾಗೆ ಮಾಡಿಕೊಳ್ಳಲು ಬರುತ್ತದೆಯೋ?

ಗುರು:— ಅಹುದ ಬರುತ್ತದೆ.

ಶಿಷ್ಯ:— ಇಸ್ಲಾಮ್ ಧರ್ಮದ ನೇಮಗಳಂತೆ, ಹೆಂಡತಿಗಾಗಿ ಗಂಡನು ಮಾಡಲೇಬೇಕಾದ ಕರ್ತವ್ಯಗಳಾವವು ?

ಗುರು:— ಗಂಡನ ಕರ್ತವ್ಯಗಳು ಹೀಗಿರುತ್ತವೆ:—

(೧) ಹೆಂಡತಿಗೆ ಧಾರ್ಮಿಕ ನೇಮಗಳನ್ನೆಲ್ಲ ಕಲಿಸಿ, ಧಾರ್ಮಿಕ ನೇಮಗಳಂತೆ ಅವಳನ್ನು ನಡೆಯ ಹಚ್ಚಬೇಕು.

(೨) ಅವಳ ಉದರ ನಿರ್ವಾಹದ ಸೆಯ ಭಾರವನ್ನು ಹೊತ್ತು, ಅವಳಿಗಾಗಿ ಅನ್ನ, ವಸ್ತ್ರಗಳನ್ನು ಒದಗಿಸಬೇಕು.

(೩) ಅವಳನ್ನು ಮತ್ತು ಮಕ್ಕಳನ್ನು ಸುಗಳಿಕೆಯಿಂದ ಸಲುಹಬೇಕಲ್ಲದೆ, ದುರ್ಗಳಿಕೆಯಿಂದ ಸಲುಹಬಾರದು.

(೪) ಅವಳ ತಾಯಿ-ತಂದೆಗಳ ಕೂಡ ಮತ್ತು ಬಂಧು ಬಳಗದವರ ಕೂಡ ಮಾನ ಮರ್ಯಾದಿಯಿಂದ ಮತ್ತು ಪ್ರೇಮದಿಂದ ನಡೆದುಕೊಳ್ಳಬೇಕು; ಮತ್ತು ಶಕ್ಯವಾದಷ್ಟು ಅವರಿಗೆ ಅವಶ್ಯಕ ಸಹಾಯವನ್ನು ನೀಡತ್ತಿರಬೇಕು.

(೫) ಹೆಂಡತಿಯ ಕೂಡ ಪ್ರೇಮ ಮಮತೆಯಿಂದ ನಡೆಯ ಬೇಕಲ್ಲದೆ, ಬೈಯುವದನ್ನೂ ಹೊಡೆಯುವದನ್ನೂ ಮಾಡಬಾರದು. ಅವಳಲ್ಲಿ ಕುಂದು ಕೊರತೆಗಳೇನಾದರೂ ಇದ್ದರೆ ಅಥವಾ ಅವಳ ತಪ್ಪುಗಳೇನಾದರೂ ಇದ್ದರೆ, ಕ್ಷಮಿಸಬೇಕು. ಆದರೆ, ಅವಳ ಕೂಡ ಹೊಂದಿಕೊಂಡು ಹೋಗುವದು ಶಕ್ಯವಾಗದಿದ್ದರೆ, ಅವಳಿಗೆ ಸಲ್ಲಬೇಕಾದ "ವಾಗ್ದಾನ-ಧನವನ್ನು" ಕೊಟ್ಟು ವಿವಾಹ-ಬಂಧನದಿಂದ ಅವಳನ್ನು ಮುಕ್ತ ಮಾಡಬೇಕು. ಆದರೆ, ಯಾವದೇ ಕಾರಣದಿಂದ ಅವಳನ್ನು ಕಾಡಬಾರದು.

ಶಿಷ್ಯ:— ಗಂಡನಿಗಾಗಿ ಹೆಂಡತಿಯು ಮಾಡಲೇಬೇಕಾದ ಕರ್ತವ್ಯಗಳಾವವು ?

ಗುರು:— ಹೆಂಡತಿಯ ಕರ್ತವ್ಯಗಳಾವವೆಂದರೆ:—

(೧) ಗಂಡನಿಗೆ ಆಜ್ಞಾ-ಧಾರಕಳಾಗಿ ಅವಳು ಇರತಕ್ಕದ್ದು.

(೨) ಗಂಡನ ಅಪ್ಪಣೆಯಿಲ್ಲದೆ ಅಥವಾ ಗಂಡನ ಮನಸ್ಸಿನ ವಿರುದ್ಧವಾಗಿ, ಮನೆಯನ್ನು ಬಿಟ್ಟು ಹೊರಗೆ ಎಲ್ಲಿಯೂ ಹೋಗಬಾರದು.

(೩) ಗಂಡನ ಕುಂದು ಕೊರತೆಗಳನ್ನು ಇತರರ ಮುಂದೆ ಹೇಳಬಾರದು.

(೪) ಮನೆತನದ ಅವಶ್ಯಕತೆಗಳಿಗಾಗಿ ಅಥವಾ ತನ್ನ ಅವಶ್ಯಕತೆಗಾಗಿ ಬೇಕಾಗುವದಕ್ಕಿಂತ ಹೆಚ್ಚಿನ ಸಾಮಾನುಗಳನ್ನು ಗಂಡನಿಂದ ಬೇಡಬಾರದು.

(೫) ಗಂಡನ ಮಾನ ಮರ್ಯಾದೆಗೆ ಕುಂದು ತಟ್ಟುವಂತಹ ಯಾವದೇ ಕೆಲಸವನ್ನು ಮಾಡಬಾರದು; ಮತ್ತು ಗಂಡನ ಮನಸ್ಸಿಗೆ ಹತ್ತುವಂಥ ಯಾವದೇ ಮಾತನ್ನು ಆಡಬಾರದು.

(೬) ಗಂಡನ ಸುಖ ದುಃಖಗಳಲ್ಲಿ ಸಮಭಾಗಿನಿಯಾಗಬೇಕು; ಮತ್ತು ಆಪತ್ಕಾಲದಲ್ಲಿ ಗಂಡನಿಗೆ ಧೈರ್ಯವನ್ನು ಕೊಡುತ್ತ ಸಹಾನುಭೂತಿಯನ್ನು ತೋರಿಸುತ್ತಿರಬೇಕು.

(೭) ಪ್ರತ್ಯಕ್ಷವಲ್ಲಿ ಅಥವಾ ಪರೋಕ್ಷದಲ್ಲಿ ಗಂಡನನ್ನು ಬೈಯ್ಯಬಾರದು, ಶಪಿಸಬಾರದು.

(೮) ಗಂಡನ ಮರ್ಯಾದೆಯ ಮತ್ತು ಸಂಪತ್ತಿನ ಪಾಲಕಳಾಗಬೇಕು.

(೯) ಗಂಡನ ತಂದೆ-ತಾಯಿಗಳು ತನ್ನ ತಂದೆ-ತಾಯಿಗಳೆಂದು ತಿಳಿದು ಅವರ ಸೇವೆ ಮಾಡಬೇಕು.; ಮತ್ತು ಗಂಡನ ಬಂಧು-ಬಳಗವವರ ಕೂಡ ಸೌಹಾರ್ದತೆಯಿಂದ ಮತ್ತು ಪ್ರೀತಿಯಿಂದ ಇರಬೇಕು.

(೧೦) ಗಂಡನು ದುರ್ಮಾರ್ಗವನ್ನು ಹಿಡಿದರೆ, ಅವನನ್ನು ಸನ್ಮಾರ್ಗಕ್ಕೆ ತರಲು ಯತ್ನಿಸಬೇಕು. ತನಗೆ ಶಕ್ಯವಿದ್ದಷ್ಟು ಗಂಡನ ಕಾಟವನ್ನು ಸಹಿಸುತ್ತಿರಬೇಕು. ಆದರೆ, ಅವನ ಕೂಡ ಹೊಂದಿಕೊಂಡು ನಡೆಯುವದು ಶಕ್ಯವಾಗದಿದ್ದರೆ, ಆವನಿಂದ ತನಗೆ ಸಲ್ಲಬೇಕಾದ "ವಾಗ್ದಾನ-ಧನ"ದ ಹಕ್ಕನ್ನು ಬಿಟ್ಟುಕೊಟ್ಟು, ವಿವಾಹ-ಬಂಧನದಿಂದ ಮುಕ್ತತೆಯನ್ನು ಹೊಂದಬೇಕು.

## (೮) "ತಲ್ಲಾಕ್"

ಶಿಷ್ಯ:— "ತಲ್ಲಾಕ್" ಅಂದರೆ ಏನು ?

ಗುರು:— ತಲ್ಲಾಕ್ ಅಂದರೆ, "ಸೋಡ ಪತ್ರ" ಅಥವಾ "ವಿವಾಹ-ವಿಚ್ಛೇದನ". ಗಂಡಹೆಂಡರಲ್ಲಿ ಜಗಳವು ಉದ್ಭೂತವಾದಾಗ, ಹೆಂಡತಿಯ ಕೂಡ ಹೊಂದಿಕೊಂಡು ಹೋಗುವದು ಗಂಡನಿಗೆ ಶಕ್ಯವಾಗದಿದ್ದರೆ, ಅವಳಿಗೆ ಸಲ್ಲಬೇಕಾದ ವಾಗ್ದಾನ-ಧನವನ್ನು ಕೊಟ್ಟು ವಿವಾಹ-ಬಂಧನದಿಂದ ಅವಳನ್ನು ಮುಕ್ತಳನ್ನಾಗಿ ಮಾಡುವದಕ್ಕೆ "ತಲ್ಲಾಕ್" ಅನ್ನುತ್ತಾರೆ. ವಿನಾ ಕಾರಣವಾಗಿ ಅಥವಾ ಸಣ್ಣ ಸಣ್ಣ ಕಾರಣಗಳಿಗಾಗಿ ಗಂಡನಾದವನು ಹೆಂಡತಿಗೆ ತಲ್ಲಾಕ್ ಕೊಡಬಾರದೆಂದು ಇಸ್ಲಾಮ್ ಧರ್ಮದ ಆದೇಶವಿದೆ.

ಆದ್ದರಿಂದ ಅನಿವಾರ್ಯ ಕಾರಣಗಳಿಲ್ಲದೆ ತಲ್ಲಾಕ್ ಕೊಡುವವನು, ಅಥವಾ ತಲ್ಲಾಕಕ್ಕಾಗಿ ಉತ್ತೇಜನ ಕೊಡುವಂಥವನು, ಇಸ್ಲಾಮ್ ಧರ್ಮದ ಆದೇಶವನ್ನು ಧಿಃಕ್ಕರಿಸಿದ ಪಾಪಕ್ಕೆ ಗುರಿಯಾಗುವನು.

## (೯) "ಖುಲಅ"

ಶಿಷ್ಯ:— "ಖುಲಅ" ಅಂದರೆ ಏನು ?

ಗುರು:— "ಖುಲಅ" ಅಂದರೆ, "ವಿವಾಹ ಬಂಧನದಿಂದ ಮುಕ್ತತೆ ಹೊಂದುವಿಕೆ". ಗಂಡಹೆಂಡರಲ್ಲಿ ಜಗಳವು ಉದ್ಭೂತವಾದಾಗ, ಗಂಡನ ಕೂಡ ಹೊಂದಿಕೊಂಡು ಹೋಗುವದು ಹೆಂಡತಿಗೆ ಶಕ್ಯವಾಗದಿದ್ದರೆ ಮತ್ತು ಗಂಡನು ತಲ್ಲಾಕ್ ಕೊಡಲು ಸಿದ್ಧನಾಗದಿದ್ದರೆ, ಗಂಡನಿಂದ ತನಗೆ ಸಲ್ಲಬೇಕಾದ ವಾಗ್ದಾನ-ಧನದ ಹಕ್ಕನ್ನು ಬಿಟ್ಟುಕೊಟ್ಟು, ಗಂಡನ ಬಂಧನದಿಂದ ಮುಕ್ತತೆಯನ್ನು ಹೊಂದುವ ಅಧಿಕಾರವು ಹೆಂಡತಿಗೆ ಇರುತ್ತದೆ. ಹೆಂಡತಿಯು ತನಗಿರುವ ಈ ಅಧಿಕಾರವನ್ನು ಚಲಾಯಿಸಿ, ವಿವಾಹ-ಬಂಧನದಿಂದ ಮುಕ್ತತೆಯನ್ನು ಹೊಂದುವದಕ್ಕೆ "ಖುಲಅ" ಅನ್ನುತ್ತಾರೆ. [ತಲ್ಲಾಕ್ ಮತ್ತು ಖುಲಅ ಇವುಗಳ ಸವಿಸ್ತಾರ ಮಾಹಿತಿಗಾಗಿ ದೊಡ್ಡ ಗ್ರಂಥಗಳನ್ನು ನೋಡಿಕೊಳ್ಳಬೇಕು.—ಲೇಖಕ.]

## (೧೦) "ಇದ್ದತ್"

ಶಿಷ್ಯ:— "ಇದ್ದತ್" ಅಂದರೆ ಏನು ?

ಗುರು:— ಗಂಡನಿಂದ ತಲ್ಲಾಕ್ ಪಡೆದ ನಂತರ, ಅಥವಾ ಗಂಡನಿಂದ ಖುಲಅ ಹೊಂದಿದ ನಂತರ, ಅಥವಾ ಗಂಡನು ಮೃತನಾದನಂತರ, "ಇಂತಿಷ್ಟು" ಅವಧಿಯ ವರೆಗೆ ಸ್ತ್ರೀಯು ಎರಡನೇ ಲಗ್ನವನ್ನು ಮಾಡಿಕೊಳ್ಳಬಾರದೆಂದು ಇಸ್ಲಾಮ್ ಧರ್ಮದ ಆದೇಶವಿದೆ. ಈ ಅವಧಿಗೆ "ಇದ್ದತ್" ಅನ್ನುತ್ತಾರೆ.

ಶಿಷ್ಯ:— "ಇದ್ದತ್" ದ ಅವಧಿಯು ಎಷ್ಟಿರುತ್ತದೆ ?

ಗುರು:— ಸ್ತ್ರೀಯು ಗರ್ಭಿಣಿಯು ಇಲ್ಲದಿದ್ದರೆ, ಮೂರು ಮಾಸಿಕ ಮುಟ್ಟುಗಳ ವರೆಗೆ (ಅಂದರೆ, ಮೂರುಸಾರೆ ಕಡೆಗಾಗುವತನಕ) ಈ ಅವ

ಧಿಯು ಇರುತ್ತದೆ; ಸ್ತ್ರೀಯು ಗರ್ಭಿಣಿ ಇದ್ದರೆ, ಕೂಸು ಜನನವಾದ ನಂತರ ಅಥವಾ ಗರ್ಭ-ಪತನವಾದ ನಂತರ ನಾಲ್ವತ್ತು ದಿವಸಗಳ ವರೆಗೆ ಈ ಅವಧಿಯು ಇರುತ್ತದೆ.

## (೧೧) "ಇಯಾದತ್"

ಶಿಷ್ಯ:— "ಇಯಾದತ್" ಅಂದರೆ ಏನು ?

ಗುರು:— ತನ್ನ ಆಪ್ತ ಮಿತ್ರರಲ್ಲಿ ಅಥವಾ ಪರಿಚಯಸ್ಥರಲ್ಲಿ ಯಾರಾದರೂ ಬೇನೆ ಬಿದ್ದಾಗ, ರೋಗಿಯ ಮನೆಗೆ ಹೋಗಿ ಅವನ ಕ್ಷೇಮ ಸಮಾಚಾರವನ್ನು ವಿಚಾರಿಸಿ, ಚಿಕಿತ್ಸೆಯ ವಿಷಯವಾಗಿ ತನಗೆ ಶಕ್ಯವಿದ್ದ ಯೋಗ್ಯ ಸಲಹೆ ಸೂಚನೆಗಳನ್ನಿತ್ತು, ಶಕ್ಯವಿದ್ದರೆ ಮತ್ತು ಅವಶ್ಯವೆನಿಸಿದರೆ ಹಣದ ಸಹಾಯವನ್ನು ನೀಡಿ, ರೋಗಿಯು ಸಂತುಷ್ಟನಾಗುವಂತೆ ನಾಲ್ಕು ಮಾತುಗಳನ್ನಾಡಿ, ರೋಗಿಗೂ ಅವನ ಮನೆಯವರಿಗೂ ಸಹಾನುಭೂತಿಯನ್ನು ತೋರಿಸುವದಕ್ಕೆ "ಇಯಾದತ್" ಅನ್ನುತ್ತಾರೆ. ಇಯಾದತ್‌ದ ಈ ರೂಢಿಯು ಮುಸಲ್ಮಾನರಲ್ಲಿ ಹ|| ಮಹಮ್ಮದ ಪೈಗಂಬರರಿಂದ ಅನುಕರಣೀಯವಾಗಿ ಬಂದಿದೆ. ಇಯಾದತಕ್ಕಾಗಿ ಹೋಗುವಾಗ ಸ್ವಚ್ಛವಾದ ಅರಿವೆಗಳನ್ನು ಧರಿಸಿ ರೋಗಿಗೆ ಉಪಯುಕ್ತವಾಗುವ ಫಲಾದಿಗಳನ್ನು ತೆಗೆದುಕೊಂಡು ಹೋಗಬೇಕು. ರೋಗಿಯ ಹಾಸಿಗೆಯ ಹತ್ತರ ಕುಳಿತು ಮೊದಲು "ಸೂರೆ ಫಲಕ್" ಮತ್ತು "ಸೂರೆ ನಾಸ್" ಈ ಎರಡು ಕುರಾನದ ಅಧ್ಯಾಯಗಳನ್ನು ಪಠಿಸಿ ರೋಗಿಯ ಶರೀರದ ಮೇಲೆ ಊದಬೇಕು. ನಂತರ ರೋಗಿಯ ಕೂಡ ಸಾವಕಾಶವಾಗಿ ಮಾತನಾಡಬೇಕು; ಮತ್ತು ಮನೆಯವರಿಗೆ ಯೋಗ್ಯ ಸಲಹೆಗಳನ್ನು ನೀಡಬೇಕು. ಅನವಶ್ಯಕವಾಗಿ ಹೆಚ್ಚು ವೇಳೆ ಅಲ್ಲಿ ಕೂಡ್ರಬಾರದು.

ಇಯಾದತ್ತದ ಸಲುವಾಗಿ ಹೋದಾಗ, ರೋಗಿಯು ಮರಣಾಂತಿಕ ಪರಿಸ್ಥಿತಿಯಲ್ಲಿದ್ದರೆ, ರೋಗಿಯ ಹಾಸಿಗೆಯನ್ನು ಬಿಟ್ಟು ಸ್ವಲ್ಪ ದೂರಾಗಿ ಕುಳಿತು ಮನೆಯವರಿಗೆ ಧೈರ್ಯದ ಮಾತುಗಳನ್ನು ಹೇಳಬೇಕು. ಮರಣಕಾಲವು ಸಮೀಪಿಸಿತೆಂದು ಗೊತ್ತಾದೊಡನೆ ದೂರಾಗಿ ಕುಳಿತು ಕುರಾನ ಪಠಣೆಯನ್ನು ಮಾಡಬೇಕು; ಮತ್ತು ಪ್ರಾಣ ಪಕ್ಷಿಯು ರೋಗಿಯ ದೇಹದಿಂದ ಹಾರಿಹೋಗುವ ವರೆಗೆ ಮನೆಯವರನ್ನು ಬಿಟ್ಟು ಹೋಗಬಾರದು.

ರೋಗಿಯು ತೀರಿಕೊಂಡನೆಂಬುದು ಗೊತ್ತಾಗುತ್ತಲೇ, "ಇನ್ನಾ ಲಿಲ್ಲಾಹಿ, ವ ಇನ್ನಾ ಇಲೈಹಿ ರಾಜಿವೂನ್" (ಪರಮಾತ್ಮನಿಗಾಗಿಯೇ ನಾವು ಇದ್ದೇವೆ! ಮತ್ತು ಆತನಲ್ಲಿಗೆ ನಾವಾದರೂ ಹೊಗಲೇ ಬೇಕಾಗಿದೆ!!) ಅಂತಾ ಪಠಿಸಬೇಕು.

ಶಿಷ್ಯ:— ರೋಗಿಯ ಮರಣವು ಸಮೀಪವಾಯಿತೆಂದು ಖಚಿತವಾದ ನಂತರ, ಅಲ್ಲಿದ್ದಂಥ ಜನರು ಏನೇನು ಮಾಡಬೇಕಾಗುತ್ತದೆ ?

ಗುರು:— ಮರಣವು ತೀರ ಸಮೀಪವಾಯಿತೆಂದು ಗೊತ್ತಾದೊಡನೆ ಅಲ್ಲಿದ್ದವರೆಲ್ಲರೂ——ಮನೆಯವರೇ ಇರಲಿ ಹೊರಗಿನವರೇ ಇರಲಿ—— ಯಾವದೇ ರೀತಿಯಾಗಿ ಗುಲ್ಲು ಗಲಾಟೆಗಳನ್ನು ಮಾಡವಲೆ ಶಾಂತರಾಗಿ ಇರಬೇಕು. ಮರಣಾಂತಿಕ ರೋಗಿಯನ್ನು ಸಾವಕಾಶವಾಗಿ ಸರಿಸುತ್ತ ಚಿತ್ತಾಗಿ ಮಲಗಿಸಬೇಕು; ಮತ್ತು ಊದಬತ್ತಿಗಳನ್ನು ಹೊತ್ತಿಸಿ ರೋಗಿಯ ಹಿಂಬದಿಗೆ ಇಡಬೇಕು. ಮೈಲಿಗೆಯುಳ್ಳವರು ಮರಣಾಂತಿಕ ರೋಗಿಯ ಹತ್ತರ ಹೋಗಬಾರದು. ಮೈಡಿಮೈಯುಳ್ಳವರೇ ರೋಗಿಯ ಸುತ್ತಲೂ ಕುಳಿತು, "ಲಾ ಇಲಾಹಾ ಇಲ್ಲಲ್ಲಾಹ್, ಮುಹಮ್ಮದುರ್ ರಸೂಲುಲ್ಲಾಹ್" ಅಂತಾ ಸಾವಕಾಶವಾಗಿ ಪಠಿಸುತ್ತಿರಬೇಕು. ರೋಗಿಯ ಹಾಸಿಗೆಯನ್ನು ಬಿಟ್ಟು ಸ್ವಲ್ಪ ದೂರಾಗಿ ಕುಳಿತು ಯಾವನಾದರೊಬ್ಬನು, ಕುರಾನದಲ್ಲಿಯ "ಸೂರೆ-ಯಾಸೀನ್", ಎಂಬ ಅಧ್ಯಾಯವನ್ನು ಪಠಿಸುತ್ತಿರಬೇಕು. ಪ್ರಾಣ ಪಕ್ಷಿಯು ಹಾರಿ ಹೋದ ನಂತರ, ಮೃತದೇಹದ ಬಾಯಿ ಮತ್ತು ಕಣ್ಣುಗಳನ್ನು ಮುಚ್ಚಿ ಬಂದು ಮಾಡಬೇಕು. ಕೈಗಳನ್ನೂ ಕಾಲುಗಳನ್ನೂ ನೀಟಾಗಿ ಮಾಡಿ, ಮುಖದ ಹೊರತಾಗಿ ಇಡೀ ಶರೀರವನ್ನೆಲ್ಲ ಸ್ವಚ್ಛವಾದ ಅರಿವೆಯಿಂದ ಮುಚ್ಚಬೇಕು. ಮೃತ ದೇಹದಿಂದ ಸ್ವಲ್ಪ ದೂರಾಗಿ ಕುಳಿತು ಒಬ್ಬಿಬ್ಬರು ಕುರಾನಪಠಣೆ ಮಾಡುತ್ತಿರಬೇಕು. ಮೃತನ ಮನೆಯವರು ಮತ್ತು ಆಪ್ತೇಷ್ಟರು ಮೃತದೇಹದ ಸುತ್ತು ಕುಳಿತುಕೊಂಡು ಕುರಾನಪಠಣೆಯನ್ನು ಕೇಳುತ್ತಿರಬೇಕು, ಇಲ್ಲವೆ ಪಾರಮಾರ್ಥಿಕ ಮಾತುಗಳನ್ನಾಡುತ್ತಿರಬೇಕು. ಆದರೆ, ಹೆಣದ ಸುತ್ತು ಕುಳಿತುಕೊಂಡು ಅಳುವವನ್ನೂ ಚೀರಾಡುವದನ್ನೂ ಮಾಡಬಾರದು. ದುಃಖವು ಉಕ್ಕೇರಿ ಬಂದರೆ, ಹೆಣದಿಂದ ದೂರು ಸರಿಧು ಅಳಬೇಕಲ್ಲದೆ, ಹೆಣದ ಹತ್ತರ ಕುಳಿತು ಅಳಬಾರದು,

## —: (೧೨) ಕೆಫನ್ ದಫನ್ :—

ಶಿಷ್ಯ:— " ಕಫನ್ ದಫನ್ " ಅಂದರೆ ಏನು?

ಗುರು:— ಮೃತದೇಹದ ಅಂತ್ಯ ಸಂಸ್ಕಾರಗಳನ್ನು ಮಾಡುವದಕ್ಕೆ " ಕಫನ್ ದಫನ್ " ಅನ್ನುತ್ತಾರೆ. ಅಂತ್ಯಸಂಸ್ಕಾರದಲ್ಲಿ ಎರಡು ಭಾಗ ಗಳಿರುತ್ತವೆ; ಮೊದಲನೆಯದಕ್ಕೆ " ಕಫ್‌ನ್ " ಮತ್ತು ಎರಡನೆಯದಕ್ಕೆ " ದಫನ್ " ಅನ್ನುತ್ತಾರೆ. ಮೃತದೇಹಕ್ಕೆ ಗುಸ್ಲ ಮಾಡಿಸಿ ಸ್ವಚ್ಛವಾದ ಮತ್ತು ಶುಭ್ರವಾದ ಅರಿವೆಗಳನ್ನು ತೊಡಿಸುವದಕ್ಕೆ " ಕಫ್‌ನ್ " ಅನ್ನುತ್ತಾರೆ. ಮತ್ತು "ಕಫನ್" ತೊಡಿಸಲ್ಪಟ್ಟ ಮೃತದೇಹವನ್ನು ಕಬರಸ್ತಾನಕ್ಕೆ ( ಹೆಣಗಳನ್ನು ಹೂಳುವ ಸ್ಥಳಕ್ಕೆ ) ಒಯ್ದು ಗೋರಿಯಲ್ಲಿ ಹೂಳುವದಕ್ಕೆ " ದಫನ್ " ಅನ್ನುತ್ತಾರೆ.

ಶಿಷ್ಯ:— " ಕಫನ್ ದಫನ್" ದ ವಿಧಿಯಲ್ಲಿ ಏನೇನು ಮಾಡಬೇಕಾಗುತ್ತದೆ ಎಂಬುದನ್ನು ಸವಿಸ್ತಾರವಾಗಿ ವಿವರಿಸಿ ಹೇಳುವಿರಾ?

### : ಕಫನ್ ವಿಧಿ :—

ಗುರು:— (೧) ಮನೆಯಲ್ಲಿ ಮೈಯತ್ ಆದನಂತ ( ಅಂದರೆ, ಯಾರಾದರೂ ಸತ್ತನಂತರ ) ಮನೆಯವರು ಮಾಡಬೇಕಾದ ಎಲ್ಲಕ್ಕೂ ಮೊದಲನೇ ಕೆಲಸವೆಂದರೆ, ಆಪ್ತಮಿತ್ರರಿಗೆ ಮತ್ತು ಪರಿಚಯದವರಿಗೆ ಮರಣದ ಸುದ್ದಿಯನ್ನು ಮುಟ್ಟಿಸಬೇಕು. ನಂತರ ಕಫನ್ ದಫನ್‌ದ ಪೂರ್ವ ಸಿದ್ಧತೆಗಳನ್ನು ಮಾಡಬೇಕು. ಕಫನಕ್ಕಾಗಿ ಬೇಕಾಗುವ ಅರಿವೆ, ಅತ್ತರ, ಕರ್ಪುರ ಊದು, ಊದಬತ್ತಿ, ಸುರ್ಮಾ, ಸಬಕಾರ ಮೊದಲಾದವುಗಳನ್ನು ತರಿಸಿಕೊಳ್ಳಬೇಕು. ಮೃತದೇಹವನ್ನು ತೊಳೆಯುವದಕ್ಕಾಗಿ ಬೇಕಾಗುವ ಫಳಿಯನ್ನು ಮತ್ತು ಮೃತದೇಹವನ್ನು ಹೊತ್ತುಕೊಂಡು ಹೋಗುವದಕ್ಕಾಗಿ ಬೇಕಾಗುವ ಡೋಲಿಯನ್ನು ಮಸೀದೆಯಿಂದ ತರಿಸಿಕೊಳ್ಳಬೇಕು. ಮೃತದೇಹವನ್ನು ತೊಳೆಯುವದಕ್ಕಾಗಿ ಒಂದೆರಡು ಕೊಡ ನೀರನ್ನು ಸ್ವಚ್ಛವಾದ ಪಾತ್ರೆಯಲ್ಲಿ ಕಾಯಿಸಲು ವ್ಯವಸ್ಥೆ ಮಾಡಬೇಕು. ನೀರು ಕಾಯಿಸುವಾಗ ಶಕ್ಯವಿದ್ದರೆ ಬಾರೀ ಗಿಡದ ಸ್ವಲ್ಪ ಸೊಪ್ಪೆಯನ್ನು ಅದರಲ್ಲಿ ಹಾಕಬೇಕು. ಗೋರಿಯನ್ನು ಸಿದ್ಧ ಮಾಡಿ ಇಡುವದಕ್ಕಾಗಿ ಕೆಲವರನ್ನು ಕಬರಸ್ತಾನಕ್ಕೆ

ಕಳುಹಿಸಬೇಕು: ಇಷ್ಟೆಲ್ಲ ಪೂರ್ವಸಿದ್ಧತೆಗಳು ಮುಗಿದ ನಂತರ, ಕಫನ ವನ್ನು (ಅಂದರೆ, ಮೃತದೇಹಕ್ಕೆ ತೊಡಿಸುವ ಉಡಿಗೆಯನ್ನು) ಸಿದ್ಧ ಮಾಡಬೇಕು.

(೨) **ಕಫನ್‌ದ ಸಲುವಾಗಿ ಬೇಕಾಗುವ ಅರಿವೆಗಳು:—** ಗಂಡಸನ ಕಫನದ ಸಲುವಾಗಿ **ಚಾದರ, ಲೂಂಗ** ಮತ್ತು **ಕಫನೀ** ಎಂಬ ಮೂರು ಅರಿವೆಗಳು ಬೇಕಾಗುತ್ತವೆ; ಆದರೆ ಸ್ತ್ರೀಯ ಕಫನದ ಸಲುವಾಗಿ **ಚಾದರ, ಲೂಂಗ, ಕಫನಿ, ಸೀನಾಬಂದ,** ಮತ್ತು **ಓಢನೀ** ಎಂಬ ಐದು ಅರಿವೆ ಗಳುಬೇಕಾಗುತ್ತವೆ, **ಲೂಂಗ** ಎಂಬುದು ಇರಲೇಬೇಕೆಂಬ ಬಂಧನವಿಲ್ಲ; ಇಲ್ಲದಿದ್ದರೂ ನಡೆಯುತ್ತದೆ. ಈ ಅರಿವೆಗಳ ವಿವರಣೆಯು ಹೀಗಿರುತ್ತದೆ:-

(೧) **ಚಾದರ್:—** ತಲೆಯಿಂದ ಪಾದಗಳ ವರೆಗೆ ಇರುವ ಉದ್ದಳತೆ ಯಗಿಂತ ಒಂದು ಫೂಟು ಹೆಚ್ಚು ಉದ್ದಾಗಿರುವ ಜೋಡು ಪದರದ ಅರಿವೆಯು ಇದಕ್ಕಾಗಿ ಬೇಕಾಗುತ್ತದೆ. ಅರಿವೆಯ ಅಗಲಳತೆಯು, ಶರೀರದ ಸುತ್ತಳತೆಯಗಿಂತ ಕನಿಷ್ಟ ಅರ್ಧ ಫೂಟು ಹೆಚ್ಚಿಗಿರಬೇಕು.

(೨) **ಲೂಂಗ:—** ತಲೆಯಿಂದ ಪಾದಗಳ ವರೆಗೆ ಇರುವ ಉದ್ದಳತೆ ಯಷ್ಟು ಉದ್ದಾಗಿರುಪ ಜೋಡು ಪದರದ ಅರಿವೆಯು ಇದಕ್ಕಾಗಿ ಬೇಕಾ ಗುತ್ತದೆ. ಈ ಅರಿವೆಯ ಅಗಲಳತೆಯು ಚಾದರಿನ ಅಗಲಗಳತೆಯಗಿಂತ ಸ್ವಲ್ಪು ಕಡಿಮೆ ಇರಬೇಕು. [ಕಫನ್‌ದಲ್ಲಿ ಲೂಂಗವು ಇರಲೇಬೇಕೆಂಬ ನೇಮವಿಲ್ಲ.]

(೩) **ಕಫನೀ:—** ಕುತ್ತಿಗೆಯಿಂದ ಹಿಡಿದು ಹರಡುಗಳ ವರೆಗೆ ಇರುವ ಉದ್ದಳತೆಯುಷ್ಟು ಉದ್ದಾಗಿರುವ ಜೋಡು ಪದರದ ಅರಿವೆಯು ಇದಕ್ಕಾಗಿ ಬೇಕಾಗುತ್ತದೆ. ಈ ಅರಿವೆಯ ಅಗಲಳತೆಯು ಚದ್ದರಿನ ಅಗಲಳತೆಯ ಅರ್ಧ ದಷ್ಟು ಇರಬೇಕು. ಈ ಅರಿವೆಯ ಮಧ್ಯದಲ್ಲಿ, ತಲೆಯು ಪಾರಾಗುವಂತೆ (T) ಈ ರೀತಿಯಾಗಿ ಹರಿಯುಬೇಕು.

(೪) **ಸೀನಾಬಂದ:—** ಮೃತಳಾದ ಸ್ತ್ರೀಯ ಎದೆಯ ಮೇಲ್ಭಾಗ ದಿಂದ ಮೊಳಕಾಲುಗಳ ವರೆಗ ಇರುವ ಉದ್ದಳತೆಯಷ್ಟು ಉದ್ದಾಗಿರುವ ಅರಿ ವೆಯು ಇದಕ್ಕಾಗಿ ಬೇಕಾಗುತ್ತದೆ.

(೫) **ಓಢನಿ:**—ಇದಕ್ಕಾಗಿ ಅಜಮಾಸ ೧೪ ವಾರ ಅರಿವೆಯ ಒಂದು ತುಂಡು ಬೇಕಾಗುತ್ತದೆ.

ಕಫನದ ಸಲುವಾಗಿ ಬೇಕಾಗುವ ಮೇಲಿನ ಅರಿವೆಗಳ ಹೊರ್ತಾಗಿ ಗುಸ್ಲ ಮಾಡಿಸುವದಕ್ಕಾಗಿ ಕೆಳಗಿನ ಅರಿಗಳು ಬೇಕಾಗುತ್ತವೆ.

(೧) ಗುಸ್ಲ ಮಾಡಿಸುವಾಗ ಮೃತದೇಹದ ನಡದಿಂದ ಮೊಣಕಾಲುಗಳ ವರೆಗೆ ಸುತ್ತುವದಕ್ಕಾಗಿ ಎರಡು ಲುಂಗಿಗಳು ಬೇಕಾಗುತ್ತವೆ; ಗುಸ್ಲ ಮಾಡಿಸುವಾಗ ಒಂದು ಮತ್ತು ಗುಸ್ಲ ಮಾಡಿಸಿದ ನಂತರ ಒಂದು.

(೨) ಗುಸ್ಲ ಮಾಡಿಸಿದ ನಂತರ ಮೈಯನ್ನೆಲ್ಲ ಒರಿಸುವದಕ್ಕಾಗಿ ಒಂದು ಅರಿವೆಯ ತುಂಡು.

(೩) ಗುಸ್ಲ ಮಾಡಿಸುವವನ ಕೈಯಲ್ಲಿ ಹಿಡಿಯಲು ನಾಲ್ಕೈದು ಸಣ್ಣ ಸಣ್ಣ ತುಂಡುಗಳು

(೪) ಗುಸ್ಲ ಮಾಡಿಸಿದ ನಂತರ ಮೂಗಿನ ಹೊರಳೆಗಳನ್ನು ಮತ್ತು ಕಿವಿಯ ರಂಧ್ರಗಳನ್ನು ಒರಿಸುವದಕ್ಕಾಗಿ ಕೆಲವು ಅರಿವೆಯ ಬತ್ತಿಗಳು.

(೫) ಸ್ತ್ರೀಯ ಮೃತದೇಹದ ಡೋಲಿಯಮೇಲೆ ಹೊದ್ದಿಸಲು ಒಂದು ಶಾಲು ಅಥವಾ ಚದ್ದರ್ [ ಗಂಡಸನ ಡೋಲಿಯ ಮೇಲೆ ಶ್ಯಾಲು ಅಥವಾ ಚದ್ದರ್ ಹೊರಿಸಬಾರದು ].

ಅಂತೂ ಎಲ್ಲ ತರದ ಅರಿವೆಗಳಿಗಾಗಿ ಕೂಡಿ ಗಂಡಸನಿಗಾಗಿ ಅಜಮಾಸ ೧೨ ವಾರ ಮತ್ತು ಸ್ತ್ರೀಯಳಿಗಾಗಿ ೧೫ ವಾರ ಅರಿವೆಯು ಬೇಕಾಗುತ್ತದೆ.

(೩) ಕಫನದ ಅರಿವೆಯು ಸಿದ್ಧವಾದ ನಂತರ, ಮನೆಯವರ ಅಪ್ಪಣೆಯನ್ನು ಪಡೆದು ಮೃತದೇಹಕ್ಕೆ ಗುಸ್ಲ ಮಾಡಿಸಬೇಕು. ಗಂಡಸನಿಗೆ ಗಂಡಸರು ಮತ್ತು ಹೆಂಗಸಳಿಗೆ ಹೆಂಗಸರು ಗುಸ್ಲ ಮಾಡಿಸಬೇಕು.

**ಗುಸ್ಲ ಮಾಡಿಸುವ ಪದ್ಧತಿಯು ಹೀಗಿರುತ್ತದೆ:—**

ಗುಸ್ಲದ ಸಲುವಾಗಿ ಉಪಯೋಗಿಸುದ ಫಳಿಯನ್ನು ಗುಸ್ಲ ಮಾಡಿಸುವ ಸ್ಥಳದಲ್ಲಿ ಇಟ್ಟು, ಅದನ್ನು ಸ್ವಚ್ಛವಾಗಿ ತೊಳೆಯಬೇಕು. ಆ ಮೇಲೆ ಮೃತದೇಹವನ್ನು ಮೂರು ನಾಲ್ಕು ಮಂದಿ ಎತ್ತಿ ತಂದು ಸಾವಕಾಶವಾಗಿ ಫಳಿಯ

ಮೇಲೆ ಚಿತ್ತಾಗಿ ಮಲಗಿಸಬೇಕು. ಮೃತದೇಹದ ತಲೆಯು ಪಶ್ಚಿಮ ದಿಕ್ಕಿನೆಡೆ ಇರಬೇಕು. ನಂತರ ಗುಸ್ಲ ಮಾಡಿಸುವ ಸ್ಥಳದ ಸುತ್ತೂ ಕಡೆಗೆ ಪಡದೆಗಳನ್ನು ಇಳಿಯ ಬಿಡಬೇಕು. ತದನಂತರ, ಗುಸ್ಲ ಮಾಡಿಸುವವನು ವಜೂ ಮಾಡಿಕೊಂಡು, ಮೃತದೇಹದ ಮೇಲಿರುವ ಅರಿವೆಗಳನ್ನು ಮತ್ತು ವಸ್ತ್ರಾಭರಣಗಳನ್ನು ತೆಗೆದು ಬೇರೆ ಕಡೆಗೆ ಇಡಬೇಕು; ಮತ್ತು ಮೃತದೇಹದ ನಡದಿಂದ ಮೊಳಕಾಲುಗಳ ವರೆಗೆ ಒಂದು ಹೊಸ ಲುಂಗಿಯನ್ನು ಸುತ್ತಬೇಕು. ನಂತರ ತನ್ನ ಬಲಗೈಯಲ್ಲಿ ಒಂದು ಅರಿವೆಯ ತುಂಡವನ್ನು ಸುತ್ತಿಕೊಂಡು ಮಲಮೂತ್ರಗಳ ಸ್ಥಳಗಳನ್ನು ವರಿಸಿ ಚನ್ನಾಗಿ ತೊಳೆಯಬೇಕು. ಆ ಮೇಲೆ ಒದ್ದೆಯಾದ ಮತ್ತೊಂದು ಅರಿವೆಯನ್ನು ತೆಗೆದುಕೊಂಡು ಹಲ್ಲು, ವಸಡೆ, ತುಟಿ, ಮತ್ತು ಮೂಗಿನ ಹೊರಳೆಗಳನ್ನು ಚನ್ನಾಗಿ ವರಿಸಬೇಕು. ನಂತರ ಮಗದೊಂದು ಅರಿವೆಯ ತುಂಡನ್ನು ತೆಗೆದುಕೊಂಡು ತಲೆಯಲ್ಲಿಯ ಮತ್ತು ಗಡ್ಡದ ಕೂದಲುಗಳನ್ನು ಚನ್ನಾಗಿ ತಿಕ್ಕಿ ತೊಳೆಯಬೇಕು. ತದನಂತರ, ತಲೆ ಮತ್ತು ಭುಜಗಳನ್ನು ಸ್ವಲ್ಪ ಮೇಲಕ್ಕೆ ಎತ್ತರಿಸಿ, ಹೊಟ್ಟೆಯ ಮೇಲೆ—ಮೇಲಿನಿಂದ ಕೆಳಗಡೆ—ಸಾವಕಾಶವಾಗಿ ಕೈಯಿಂದ ತಿಕ್ಕಬೇಕು. ಹೀಗೆ ಮಾಡುವದರಿಂದ ಮೃತದೇಹದ ರಂಧ್ರಗಳಿಂದ ಏನಾದರೂ ಹೊರಬಂದರೆ ಅದನ್ನು ಅರಿವೆಯಿಂದ ವರಿಸಿ ತೊಳೆಯಬೇಕು. ಆ ನಂತರ ಇಡೀ ಶರೀರವನ್ನು ಸಾಬೂನ ಹಚ್ಚಿ ಸ್ವಚ್ಛವಾಗಿ ತೊಳೆಯಬೇಕು. ನಂತರ, ಮೃತದೇಹವನ್ನು ಎಡಮಗ್ಗಲಿಗೆ ಹೊರಳಿಸಿ ತಲೆಯಿಂದ ಪಾದಗಳ ವರೆಗೆ ಒಮ್ಮೆ ನೀರು ಹನಿಸಬೇಕು. ತದನಂತರ, ಬಲಮಗ್ಗಲಿಗೆ ಹೊರಳಿಸಿ ಮತ್ತೊಮ್ಮೆ ನೀರು ಹನಿಸಬೇಕು. ಇಷ್ಟಾದ ನಂತರ ಮೃತದೇಹವನ್ನು ಚಿತ್ತಾಗಿ ಮಲಗಿಸಿ **ವಜೂ ಮಾಡಿಸಬೇಕು;** ಮತ್ತು ಇಡೀ ಶರೀರದ ಮೇಲೆ ಮೂರು ಸಾರೆ **ಗುಸ್ಲದ ನೀರನ್ನು** ಹಾಕಬೇಕು. ಆ ನಂತರ ಶರೀರವನ್ನು ಚನ್ನಾಗಿ, ವರಿಸಿ, ವದ್ದೆಯಾದ ಲುಂಗಿಯನ್ನು ತೆಗೆದು ಮತ್ತೊಂದು ಹೊಸ ಲುಂಗಿಯನ್ನು ನಡಕ್ಕೆ ಸುತ್ತಬೇಕು. ಮೂಗಿನ ಹೊರಳೆಗಳಲ್ಲಿ ಮತ್ತು ಕಿವಿಯ ರಂಧ್ರಗಳಲ್ಲಿ ಬತ್ತಿಗಳನ್ನಾಡಿಸಬೇಕು. **ಇಲ್ಲಿಗೆ ಗುಸ್ಲ ಮಾಡಿಸುವದು ಮುಗಿದಂತಾಯಿತು.**

ಮೃತನ ಹೆಂಡತಿಯು ಅಲ್ಲಿ ಹಾಜರಾ ಇದ್ದದ್ದಾದರೆ, ಮತ್ತು ಮೃತನು ತನ್ನ ಹೆಂಡತಿಗೆ ಕೊಡಬೇಕಾದ ವಾಗ್ದಾನ-ಧನವನ್ನು ತನ್ನ ಜೀವಮಾನದಲ್ಲಿ

ಕೊಟ್ಟಿರದಿದ್ದರೆ, ಮೃತನ ಮಾಲ್ಕಿಯಲ್ಲಿಯ ಒಂದು ದುಡ್ಡು ತೆಗೆದುಕೊಂಡು ಗುಸ್ಲ ಮಾಡಿಸುವವನು ಮೃತನ ಹೆಂಡತಿಗೆ ಹೀಗೆ ಕೇಳಬೇಕು,—"ನಿನ್ನ ಗಂಡನಿಂದ ನಿನಗೆ ಸಲ್ಲಬೇಕಾದ ವಾಗ್ದಾನ-ಧನದ ಪೈಕಿ ಈ ದುಡ್ಡು ಸ್ವೀಕರಿಸಿ, ವಾಗ್ದಾನ-ಧನದ ಉಳಿದ ರಕಮುವನ್ನು ಮಾಫ್ ಮಾಡುತ್ತೀಯೇನಮ್ಮಾ?" ಮಾಫ್ ಮಾಡುವ ಇಚ್ಛೆಯು ಹೆಂಡತಿಗೆ ಇದ್ದರೆ, ಆ ದುಡ್ಡು ಸ್ವೀಕರಿಸಿ, "ನನ್ನ ಗಂಡನಿಂದ ನನಗೆ ಸಲ್ಲಬೇಕಾದ ವಾಗ್ದಾನ-ಧನದ ರಕಮುವನ್ನು ಮಾಫ್ ಮಾಡುತ್ತೇನೆ" ಅಂತಾ ಅವಳು ಉತ್ತರಿಸಬೇಕು.

ಇದೇ ರೀತಿಯಾಗಿ ಮೃತನು ಪ್ರೌಢಾವಸ್ಥೆಯನ್ನು ಮುಟ್ಟದಂಥ ಬಾಲಕನಾಗಿದ್ದರೆ ಅಥವಾ ಬಾಲಿಕೆಯಾಗಿದ್ದರೆ, ಮತ್ತು ತಾಯಿಯು ಅಲ್ಲಿ ಹಾಜರ್ ಇದ್ದರೆ, ಗುಸ್ಲ ಮಾಡಿಸುವವನು ಮೃತನ ತಂದೆಯಿಂದ ಅಥವಾ ಪಾಲಕನಿಂದ ಒಂದು ದುಡ್ಡು ಇಸಿದುಕೊಂಡು ತಾಯಿಯ ಕೈಯಲ್ಲಿ ಕೊಡುತ್ತ, "ನಿನ್ನ ಕಂದನಿಗೆ ಹಾಲನ್ನುಣಿಸಿದ ನಿನ್ನ ಋಣವನ್ನು ಮಾಫ್ ಮಾಡಮ್ಮಾ" ಅಂತಾ ಕೇಳಬೇಕು. ತಾಯಿಯು ದುಡ್ಡು ಸ್ವೀಕರಿಸಿ, "ನನ್ನ ಕಂದನಿಗೆ ಹಾಲುಣಿಸಿದ ಋಣವನ್ನು ಮಾಫ್ ಮಾಡುತ್ತೇನೆ" ಅಂತಾ ಉತ್ತರಿಸಬೇಕು.

(೪) ಗುಸ್ಲ ಮಾಡಿಸುವದು ಮುಗಿಯುವದರೊಳಗಾಗಿ, ಇತ್ತ ಬೇರೆ ಕಡೆಗೆ ಒಂದು ಚ್ಯಾಪೆಯನ್ನು ಅಥವಾ ಜಮುಖಾನೆಯನ್ನು ಹಾಸಿ ಅದರ ಮೇಲೆ ಕಫನದ ಅರಿವೆಗಳನ್ನು ವ್ಯವಸ್ಥಿತವಾಗಿ ಜೋಡಿಸಿ ಇಟ್ಟಿರಬೇಕು. **ಕಫನದ ಅರಿವೆಗಳನ್ನು ಜೋಡಿಸುವ ಪದ್ಧತಿ ಹೀಗಿರುತ್ತದೆ:—**

(ಅ) **ಗಂಡಸನಿಗಾಗಿ:—** ಮೊದಲು ಕಫನದ ಅರಿವೆಗಳಿಗೆ ಊದಿನ ಹೊಗೆಯನ್ನು ಕೊಡಬೇಕು. ನಂತರ ಚ್ಯಾಪೆಯ ಮೇಲೆ ಚಾದರವನ್ನು ಹಾಸಿ, ಅದರ ಮೇಲೆ ಲೂಂಗವನ್ನು ಹಾಸಿ, ಅದರ ಮೇಲೆ ಕಫನೀ ಹಾಸಬೇಕು. ತಲೆಯು ಹಾಯುವದಕ್ಕಾಗಿ ಕಫನಿಯ ಮಧ್ಯದಲ್ಲಿ ಹರಿಯಲ್ಪಟ್ಟ ಸ್ಥಳದ ವರೆಗೆ ಕಫನಿಯ ಮೇಲ್ಭದರವನ್ನು ಮಡಿಚಿ ಮೇಲ್ಗಡೆಗೆ ಸರಿಸಿ ಇಡಬೇಕು. ಹೀಗೆ ಜೋಡಿಸಲ್ಪಟ್ಟ ಕಫನದ ತುಂಬೆಲ್ಲ ಅತ್ತರನನ್ನು ಸಿಂಪಡಿಸಿ ಕರ್ಪೂರದ ಪುಡಿಯನ್ನು ಉದರಿಸಬೇಕು.

(ಬ) **ಹೆಂಗಸಳಿಗಾಗಿ:—** ಅರಿವೆಗಳಿಗೆ ಉದಿನ ಹೊಗೆಯನ್ನು ಕೊಟ್ಟು, ಚ್ಯಾಪಿಯ ಮೇಲೆ ಚಾದರ, ಲೂಂಗ ಮತ್ತು ಕಫನೀಗಳನ್ನು ಹಾಸಿ, ಕಫನಿಯ ಮೇಲ್ಪದರವನ್ನು ಮಡಿಚಿ ಇಡಬೇಕು. ಕಫನಿಯ ಮೇಲೆ ಸೀನಾ ಬಂದವನ್ನು ಹಾಸಬೇಕು. ಕಫನಿಯ ಮೇಲ್ಭಾಗದಲ್ಲಿ ಓಡ ನೀಯನ್ನು ಇಡಬೇಕು. ಹೀಗೆ ಜೋಡಿಸಲ್ಪಟ್ಟ ಕಫನದ ತುಂಬೆಲ್ಲ ಅತ್ತರ ವನ್ನು ಸಿಂಪಡಿಸಿ ಕರ್ಪೂರದ ಪುಡಿಯನ್ನು ಉದರಿಸಬೇಕು.

ಮೇಲಿನಂತೆ ಜೋಡಿಸಲ್ಪಟ್ಟ ಕಫನದ ಮೇಲೆ ಗುಸ್ಲ ಮಾಡಿಸಲ್ಪಟ್ಟ ಮೃತದೇಹವನ್ನು ಸರಿಯಾಗಿ ಮತ್ತು ಚಿತ್ತಾಗಿ ಮಲಗಿಸಬೇಕು; ಮತ್ತು **ಈ ರೀತಿಯಾಗಿ ಕಫನ್ ತೊಡಿಸಬೇಕು:—**

(ಅ) **ಗಂಡಸನಿಗಾಗಿ—** ಕಪನೀಯ ಮೇಲ್ಪದರವನ್ನು ತಲೆ ಮತ್ತು ಮುಖದ ಮೇಲಿಂದ ಹಾಯಿಸಿ, ಹರಡುಗಳ ವರೆಗೆ ಹಬ್ಬಿಸಬೇಕು. ನಂತರ ಮುಖಕ್ಕೆ ಅತ್ತರವನ್ನು ಹಚ್ಚಿ ಎದೆಯ ಮೇಲೆ ಅತ್ತರವನ್ನು ಸಿಂಪಡಿಸಬೇಕು. ಆ ನಂತರ ಹಣೆ, ಮೂಗು, ಮೊಣಕಾಲಗಂಡು ಮೊಳಕೈಗಂಡುಗಳ ಮೇಲೆ ಮತ್ತು ಕೈಕಾಲುಗಳ ಉಗುರುಗಳಲ್ಲಿ ಕರ್ಪೂರದ ಪುಡಿಯನ್ನು ಉದರಿಸಬೇಕು. ಕಣ್ಣು ಎವೆಗಳಿಗೆ ಸುರ್ಮಾ ಹಚ್ಚಬೇಕು. ಇಷ್ಟೆಲ್ಲವಾದ ನಂತರ ಮನೆಯವರಿಗೆ ಕಡೆಯ ದರ್ಶನವನ್ನು ಮಾಡಿಸಬೇಕು. ಆ ಮೇಲೆ ಲೂಂಗದ ಪದರಗಳನ್ನು ಮೊದಲು ಎಡಗಡೆಯಿಂದ ನಂತರ ಬಲಗಡೆಯಿಂದ ಮೃತದೇಹದ ಮೇಲೆ ಹೊರಳಿಸಬೇಕು. ತದನಂತರ, ಚಾದರದ ಪದರಗಳನ್ನು ಚನ್ನಾಗಿ ಹೊರಳಿಸಿ, ತಲೆಯ ಮೇಲ್ಭಾಗದಲ್ಲಿರುವ ಮತ್ತು ಪಾದಗಳ ಕೆಳಭಾಗದಲ್ಲಿರುವ ಅರಿವೆಯ ತುದಿಗಳನ್ನು ಚನ್ನಾಗಿ ಜಗ್ಗಿ ಮಡಿಚಿ, ಅರಿವೆಯ ಕಸಿಗಳಿಂದ ಬಿಗಿಯಾಗಿ ಕಟ್ಟಬೇಕು. ನಂತರ, ಮೂರನೇ ಕಸಿಯನ್ನು ಶರೀರದ ನಡು ಭಾಗದ ಸುತ್ತ ಚನ್ನಾಗಿ ಬಿಗಿದು ಕಟ್ಟಬೇಕು. **ಇಲ್ಲಿಗೆ "ಕಫನ್" ವಿಧಿಯು ಮುಗಿದಂತಾಯಿತು.**

(ಬ) **ಹೆಂಗಸಳಿಗಾಗಿ—** ಮೊದಲು ಕಫನೀ ತೊಡಿಸಬೇಕು. ನಂತರ ತಲೆಯ ಕೂದಲುಗಳನ್ನು ಇಬ್ಭಾಗವಾಗಿ ಮಾಡಿ ಎರಡೂ ಹೆಗಲುಗಳ

ಮೇಲಿಂದ ಹಾಯಿಸಿ ಎದೆಯ ಮೇಲೆ ಬರುವಂತೆ ತೂದಲುಗಳನ್ನು ಹೊರಳಿಸಬೇಕು. ನಂತರ ಅತ್ತರ್ ಕರ್ಪೂರ ಮೊದಲಾದವುಗಳನ್ನು ಲೇಪಿಸಬೇಕು. ನಂತರ, ಸೀನಾಬಂದವನ್ನು ಎದೆಯಿಂದ ಮೊಳಕಾಲುಗಳ ವರೆಗೆ ಹೊದ್ದಿಸಬೇಕು. ಆ ನಂತರ ಓಢನಿಯನ್ನು ದುಬ್ಬದ ಕೆಳಗಿನಿಂದ ಹಾಸಿ ತಲೆಯ ಮೇಲೆ ತರಬೇಕು. ಇಷ್ಟಾದ ನಂತರ ಮನೆಯವರಿಗೆ ಕಡೆಯ ದರ್ಶನ ಮಾಡಿಸಬೇಕು. ತದನಂತರ, ಓಢನಿಯ ಎಡಸೆರಗ ವನ್ನು ಮುಖದ ಮೇಲಿಂದ ಹಾಯಿಸಿ ಬಲಗಡೆಯ ಹೆಗಲ ಮೇಲೆ ಹೊರಳಿಸಬೇಕು; ಮತ್ತು ಬಲಸೆರಗವನ್ನು ಹೊರಳಿಸಿ ಎದೆಯ ತುಂಬ ಹೊದ್ದಿಸಬೇಕು. ಆ ನಂತರ ಲುಂಗವನ್ನು ಮತ್ತು ಚಾದರವನ್ನು ಶರೀ ರದ ತುಂಬೆಲ್ಲ ಹೊರಳಿಸಿ ಸುತ್ತಬೇಕು. ತಲೆಯ ಮೇಲ್ಭಾಗದಲ್ಲಿರುವ ಮತ್ತು ಪಾದಗಳ ಕೆಳಭಾಗದಲ್ಲಿರುವ ಅರಿವೆಯ ತುದಿಗಳನ್ನು ಚನ್ನಾಗಿ ಜಗ್ಗಿ, ಮಡಿಚಿ, ಕಸಿಗಳಿಂದ ಬಿಗಿಯಾಗಿ ಕಟ್ಟಬೇಕು. ಆ ನಂತರ, ಮೂರನೇ ಕಸಿಯನ್ನು ಶರೀರದ ನಡುಭಾಗದ ಸುತ್ತ ಕಟ್ಟಬೇಕು. **ಇಲ್ಲಿಗೆ ಕಫನ್ ವಿಧಿಯು ಪೂರ್ಣವಾದಂತಾಯಿತು.**

## —ದಫನ್ ವಿಧಿ—

(೫) "ಕಫನ್" ವಿಧಿಯು ಪೂರ್ಣವಾದ ನಂತರ ಮೃತದೇಹವನ್ನು ಡೋಲಿಯಲ್ಲಿ ಮಲಗಿಸಬೇಕು. ಸ್ತ್ರೀ ದೇಹವನ್ನು ಡೋಲಿಯಲ್ಲಿ ಮಲಗಿಸಿದ ನಂತರ, ಡೋಲಿಯ ಮೇಲೆ ಮುಚ್ಚಳವನ್ನು ಇಟ್ಟು ಅದರ ಮೇಲೆ ಶ್ಯಾಲ ವನ್ನಾಗಲೀ ಅಥವಾ ಚದ್ದರವನ್ನಾಗಲಿ ಹೊದ್ದಿಸಬೇಕು. ಮೃತದೇಹವನ್ನು ಡೋಲಿಯಲ್ಲಿ ಮಲಗಿಸಿದ ನಂತರ ಎಲ್ಲರೂ ಎದ್ದು ನಿಂತು ಫಾತಿಹಾ ಪಠಿಸ ಬೇಕು. ನಂತರ, ನಾಲ್ಕು ಜನರು ಡೋಲಿಯನ್ನು ಹೊತ್ತು ಕಬರಸ್ತಾನದತ್ತ ಹೊರಡಬೇಕು; ಮತ್ತು ಉಳಿದ ಜನರೆಲ್ಲ ಡೋಲಿಯ ಹಿಂದೆ ನಡೆಯುತ್ತ ಹೋಗಬೇಕು. ಡೋಲಿಯನ್ನು ಹೊರುವವರಲ್ಲಿ ಕೂಡಿದ ಜನರೆಲ್ಲರೂ ಭಾಗ ತೆಗೆದುಕೊಳ್ಳಲೇಬೇಕು; ಯಾಕೆಂದರೆ, ಡೋಲಿಯನ್ನು ಹೊರುವದು ಪುಣ್ಯ ಕೆಲಸವಾಗಿದೆ. ಡೋಲಿಯು ಓಣಿಗುಂಟ ಅಥವಾ ಬಾಝಾರದಲ್ಲಿ ಹಾಯ್ದು ಹೋಗುವಾಗ, ಅಲ್ಲಿದ್ದವರು ತಮ್ಮ ಕೆಲಸಗಳನ್ನು ಬದಿಗೊತ್ತಿ ಪ್ರೇತಯಾ ತ್ರೆಯಲ್ಲಿ ಭಾಗವಹಿಸಬೇಕು; ಮತ್ತು ಕೆಲವು ಹೆಜ್ಜೆಗಳ ವರೆಗಾದರೂ

ಡೋಲಿಯನ್ನು ಹೊರಬೇಕು. ಡೋಲಿಯು ಹಾಯ್ದು ಹೋಗುವಾಗ, ತಮ್ಮ ಸ್ಥಳವನ್ನು ಬಿಟ್ಟು ಡೋಲಿಯನ್ನು ಹಿಂಬಾಲಿಸುವದು ಶಕ್ಯವಾಗದಿದ್ದರೆ, ಕುಳಿತಲ್ಲಿಯೇ ಎದ್ದು ನಿಂತು ಮೃತನಿಗೆ ಗೌರವ ಸಲ್ಲಿಸಬೇಕು.

ಡೋಲಿಯು ಕಬರಸ್ತಾನದ ಹದ್ದಿಯನ್ನು ಹೋಗಿ ಮುಟ್ಟಿದ ನಂತರ, ಕಬರಸ್ತಾನದ ಹದ್ದಿಯ ಹೊರಗಡೆಯಲ್ಲಿ ಡೋಲಿಯನ್ನು ಇಳಿಸಿ ನೆಲದ ಮೇಲೆ ಇಡಬೇಕು. ಡೋಲಿಯನ್ನು ನೆಲದ ಮೇಲೆ ಇಡುವದಕಿಂತ ಮುಂಚಿತವಾಗಿ ನೆಲದ ಮೇಲೆ ಯಾರೂ ಕೂಡ್ರಬಾರದು. ತದನಂತರ ಡೋಲಿಯ ಹಿಂದೆ ಪಶ್ಚಿಮಾಭಿಮುಖವಾಗಿ ನಿಂತು "ನಮಾಜೆ-ಜನಾಜಾ" (ಪ್ರೇತ-ಪ್ರಾರ್ಥನೆ) ಅರ್ಪಿಸಬೇಕು. ಈ ಪ್ರಾರ್ಥನೆಯ ಮುಖಂಡತ್ವವನ್ನು ಮೃತನ ಪಾಲಕನು ಅಥವಾ ವಾರಸದಾರನು ವಹಿಸಬೇಕು. ಮುಖಂಡತ್ವವನ್ನು (ಇಮಾಮತ್) ವಹಿಸುವದು ಅವನಿಗೆ ಶಕ್ಯವಿಲ್ಲದಿದ್ದರೆ, ಅಲ್ಲಿದ್ದಂಥ ತನ್ನ ಆಪ್ತ ಮಿತ್ರರಲ್ಲಿಯ ಯಾವನಾವರೊಬ್ಬನಿಗೆ ನಮಾಜದ ಇಮಾಮತ್‌ವನ್ನು ವಹಿಸಲು ಬಿನ್ನವಿಸಿಕೊಳ್ಳಬೇಕು. "ನಮಾಜೆ-ಜನಾಜಾ" ಇದನ್ನು ಅರ್ಪಿಸುವ ಪದ್ಧತಿಯು ಹೀಗೆ ಇರುತ್ತದೆ—

**ನಮಾಜೆ–ಜನಾಜಾ—**

(೬) ಇಮಾಮನು ಡೋಲಿಯ ಹಿಂದೆ ಪಶ್ಚಿಮಾಭಿಮುಖವಾಗಿ ನಿಲ್ಲಬೇಕು; ಮತ್ತು ಉಳಿದವರೆಲ್ಲ ಅವನ ಹಿಂದೆ ಸಾಲಾಗಿ ನಿಲ್ಲಬೇಕು. ಮುಕ್ತದೀ ಜನರ (ಹಿಂಬಾಲಕರ) ಸಂಖ್ಯೆಯು ಹೆಚ್ಚಿಗಿದ್ದರೆ, ೩, ೫ ಅಥವಾ ೭ ಸಾಲುಗಳನ್ನು ಮಾಡಿಕೊಳ್ಳಬೇಕು. ಆದರೆ, ೨, ೪, ೬ ಸಾಲುಗಳನ್ನು ಮಾಡಿಕೊಳ್ಳಬಾರದು. ಎಲ್ಲರೂ ಸಾಲಾಗಿ ನಿಂತ ನಂತರ ಹೀಗೆ ನಿಯ್ಯತ್ ಮಾಡಬೇಕು.—

"ಮೈ ನಮಾಜ ಪಢತಾ ಹುಂವ್ ಅಲ್ಲಾಹುತಾಲಾ ಕೋ ರಾಜೀ ಕರನೇಕೆ ಲಿಯೆ, ಔರ್ ದುಆ ಇಸ್ ಮೈಯತ್ಕೆ ಲಿಯೆ"

ಅನು॥ ಪರಮಾತ್ಮನನ್ನು ಸಂತೈಸುವದಕ್ಕಾಗಿ ಮತ್ತು ಈ ಮೃತನ ಉದ್ಧಾರಕ್ಕೋಸ್ಕರವಾಗಿ, ಪರಮಾತ್ಮನನ್ನು ಬೇಡಿಕೊಳ್ಳಲು ನಾನು ಪ್ರಾರ್ಥನೆಯನ್ನು ಅರ್ಪಿಸುತ್ತೇನೆ.

ಮೇಲಿನಂತೆ ನಿಯ್ಯತ್ ಪಠಿಸಿದ ನಂತರ, ಇಮಾಮನು ಎತ್ತರವಾದ ಧ್ವನಿಯಿಂದ ಮತ್ತು ಹಿಂಬಾಲಕರು ಸಾವಕಾಶವಾಗಿ "ಅಲ್ಲಾಹು-ಅಕ್ಬರ್" ಅಂತಾ ಅನ್ನುತ್ತ ಎರಡೂ ಕೈಗಳನ್ನು ಕಿವಿಗಳ ವರೆಗೆ ಮೇಲಕ್ಕೆತ್ತಬೇಕು; ನಂತರ ಕೈಗಳನ್ನು ಕೆಳಗೆ ತಂದು ಹೊಕ್ಕಳ ಭಾಗದ ಕೆಳಗೆ ಕಟ್ಟಿಕೊಳ್ಳಬೇಕು. ಆ ನಂತರ ಎಲ್ಲರೂ ಬಾಯಲ್ಲಿಯೇ ಈ ಕೆಳಗಿನ "ಸನಾ" ಪಠಿಸಬೇಕು.

"ಸುಬ್ಹಾನಕಲ್ಲಾಹುಮ್ಮಾ ವ ಬಿಹಮ್ದಿಕ ವ ತಬಾರಕಸ್ಮುಕ, ವ ತಆಲಾ ಜದ್ದುಕ ವ ಜಲ್ಲ ಸನಾಉಕ, ವ ಲಾ ಇಲಾಹಾ ಗೈರುಕ"

ಅನು॥ ಹೇ ಪರಮಾತ್ಮಾ, ನೀನೇ ಪರಮ ಪಾವನನು! ನಿನ್ನನ್ನೇ ನಾವು ಸ್ತುತಿಸುವೆವು. ನಿನ್ನ ನಾಮವು ಮಂಗಳದಾಯಕವಿದೆ! ನಿನ್ನ ಶ್ರೇಷ್ಠತ್ವವು ಮಿಗಿಲಾದದ್ದಿದೆ! ನಿನ್ನ ನಾಮಕೀರ್ತಿಯು ಉಜ್ವಲವಾಗಿದೆ! ಮತ್ತು ನಿನ್ನ ಹೊರತಾಗಿ ಮತ್ತಾವನೂ ಪೂಜಿತನಿಲ್ಲ!!

"ಸನಾ" ಪಠಿಸಿದ ನಂತರ, ಇಮಾಮನು ಎತ್ತರವಾದ ಧ್ವನಿಯಿಂದ ಮತ್ತು ಹಿಂಬಾಲಕರು ಬಾಯಲ್ಲಿಯೇ, "ಅಲ್ಲಾಹು-ಅಕ್ಬರ್" ಅಂತಾ ಅನ್ನುತ್ತ ಆಕಾಶದೆಡೆ ಸ್ವಲ್ಪ ಮುಖವನ್ನೆತ್ತಿ, ಕೆಳಗೆ ಬಿಡಬೇಕು.

ತದನಂತರ, ಎಲ್ಲರೂ ಬಾಯಲ್ಲಿಯೇ "ದರೂದೆ-ಇಬ್ರಾಹೀಮ್" ವನ್ನು ಪಠಿಸಿ, ಮತ್ತೆ "ಅಲ್ಲಾಹು-ಅಕ್ಬರ್" ಅಂತಾ ಅನ್ನುತ್ತ ಮುಖವನ್ನು ಆಕಾಶದೆಡೆ ಎತ್ತಿ, ಕೆಳಗೆ ಬಿಡಬೇಕು.

ಆ ನಂತರ, ಕೆಳಗೆ ಕೊಟ್ಟ "ದುಆ"ಗಳಲ್ಲಿಯ ಯಾವದಾದರೊಂದನ್ನು ಪಠಿಸಬೇಕು.—

**(ಅ) ಮೃತ ದೇಹವು ಪ್ರೌಢಳಾದ ಸ್ತ್ರೀಯಳದು ಅಥವಾ ಪುರುಷನದು ಇದ್ದರೆ—**

"ಅಲಾಹುಮ್ಮಗ್ಫಿರ್ಲಿ ಹೈಯ್ಯಿನಾ ವ ಮೈಯ್ಯಿತಿನಾ, ವ ಷಾಹಿದಿನಾ ವ ಗಾಯಿಬಿನಾ, ವ ಸಗೀರಿನಾ ವ ಕಬೀರಿನಾ, ವ ಜಕರಿನಾ ವ ಉನ್ಸಾನಾ; ಅಲ್ಲಾಹುಮ್ಮಾ, ಮನ್ ಅಹ್ಯೈತಹು ಮಿನ್ನಾ, ಫ ಅಹ್ಯಿಹಿ ಅಲಲ್-ಇಸ್ಲಾಮಿ; ವ ಮನ್ ತವಫ್ಫೈತಹು ಮಿನ್ನಾ, ಫತವಫ್ಫಹು ಅಲಲ್ ಈ ಮಾನ್"

ಅನು॥ ಹೇ ಪರಮಾತ್ಮಾ, ನಮ್ಮ ಜನರನ್ನೆಲ್ಲರನ್ನೂ— ಅಂದರೆ ಜೀವಂತಾಗಿ ಇದ್ದವರನ್ನೂ ಮತ್ತು ಸತ್ತವರನ್ನೂ, ಇಲ್ಲಿ ಹಾಜರ್ ಇದ್ದವರನ್ನೂ ಮತ್ತು ಇಲ್ಲದವರನ್ನೂ, ಸಣ್ಣವರನ್ನೂ ಮತ್ತು ದೊಡ್ಡವರನ್ನೂ, ಹೆಂಗಸರನ್ನೂ ಮತ್ತು ಗಂಡಸರನ್ನೂ—ಕ್ಷಮಿಸು; ಹೇ ಪರಮಾತ್ಮಾ ನೀನು ಜೀವಂತಾಗಿ ಇಟ್ಟಿರುವ ನಮ್ಮ ಜನರನ್ನೆಲ್ಲರನ್ನೂ ಇಸ್ಲಾಮ್ ಧರ್ಮದ ನೇಮಗಳಂತೆ ನಡೆಯ ಹಚ್ಚು; ಮತ್ತು ಯಾರಿಗೆ ನೀನು ಮರಣವನ್ನು ಒದಗಿಸಬೇಕೆನ್ನುವಿಯೋ, ಅಂಥವರಿಗೆ ಶ್ರದ್ಧಾ-ಮರಣವನ್ನು (ಮಾತುಲ್— ಈಮಾನ್) ದಯಪಾಲಿಸು.

## (ಬ) ಮೃತನು ಪ್ರೌಢನಲ್ಲದ ಬಾಲಕನಿದ್ದರೆ—

"ಅಲ್ಲಾಹುಮ್ಮಜ್ ಜಅಲಹು ಲನಾ ಫರತಂವ್, ವಜ್‌ಅಲ್‌ಹು ಲನಾ ಅಜರಂವ್ ವ ಜುಖರಂವ್, ವಜ್‌ಅಲ್‌ಹು ಲನಾ ಷಾಫಿಅಂವ್ ವ ಮುಷಫ್ಫಿಅ"

ಅನು॥ ಹೇ ಪರಮಾತ್ಮಾ, ಈ ಬಾಲಕನನ್ನು, ನಮ್ಮ ಮೋಕ್ಷದ ಸಲುವಾಗಿಯೇ "ಮುಂಚಿತವಾಗಿ ಹೋಗುವಂಥವನ"ನ್ನಾಗಿ ಮಾಡು ! ಮತ್ತು [ಈ ಬಾಲಕನ ಮರಣದಿಂದ ನಮಗೆ ಒದಗಿದ] ವಿರಹ-ಸಂತಾಪವನ್ನು, ನಮ್ಮ ಪರಲೋಕ ಯಾತ್ರೆಯ ಬುತ್ತಿಯನ್ನಾಗಿ ಮಾಡು! ಈ ಬಾಲಕನನ್ನು, ನಮಗಾಗಿ ನಿನ್ನ ಮುಂದೆ "ಸಿಫಾರಿಷ್ ಮಾಡುವಂಥವನ"ನ್ನಾಗಿಮಾಡು ! ಮತ್ತು "ತನ್ನ ಸಿಫಾರಿಷಕ್ಕೆ ನಿನ್ನ ಮಾನ್ಯತೆಯನ್ನು ಪಡೆದುಕೊಂಡವನ"ನ್ನಾಗಿ ಮಾಡು !

## (ಕ) ಮೃತಳು ಪ್ರೌಢಳಲ್ಲದ ಬಾಲಿಕೆಯಾಗಿದ್ದರೆ—

"ಅಲ್ಲಾಹುಮ್ಮಜ್. ಜಅಲ್‌ಹಾ ಲನಾ ಫರತಂವ್, ವ ಜಅಲಹಾ ಲನಾ ಅಜರಂವ್ ವ ಜುಖರಂವ್, ವ ಜಅಲಹಾ ಲನಾ ಷಾಫಿಅಂವ್ ವ ಮುಷಫ್ಫಹ:"

ಅನು॥ ಹೇ ಪರಮಾತ್ಮಾ, ಈ ಬಾಲಿಕೆಯನ್ನು, ನಮ್ಮ ಮೋಕ್ಷದ ಸಲುವಾಗಿಯೇ "ಮುಂಚಿತವಾಗಿ ಹೋಗುವವಳ"ನ್ನಾಗಿ ಮಾಡು! ಮತ್ತು [ಈ ಬಾಲಿಕೆಯ ಮರಣದಿಂದ ನಮಗೆ ಒದಗಿದ] ವಿರಹ—ಸಂತಾಪವನ್ನು, ನಮ್ಮ ಪರಲೋಕಯಾತ್ರೆಯ ಬುತ್ತಿಯನ್ನಾಗಿ ಮಾಡು ! ಈ ಬಾಲಿಕೆಯನ್ನು, ನಮಗಾಗಿ ನಿನ್ನ ಮುಂದೆ "ಸಿಫಾರಿಷ್ ಮಾಡುವವಳ"ನ್ನಾಗಿ ಮಾಡು ! ಮತ್ತು "ತನ್ನ ಸಿಫಾರಿಷಕ್ಕೆ ನಿನ್ನ ಮಾನ್ಯತೆಯನ್ನು ಪಡೆದುಕೊಂಡವಳ"ನ್ನಾಗಿ ಮಾಡು !

ಮೇಲಿನ ದುಆಗಳಲ್ಲಿಯ ಸಮಯೋಚಿತವಾದ ದುಆ ಪಠಿಸಿ, "ಅಲ್ಲಾಹು-ಅಕ್ಬರ್" ಅಂತಾ ಅನ್ನುತ್ತ ಆಕಾಶವೆಡೆ ಮುಖವನ್ನೆತ್ತಿ, ಕೆಳಗೆ ಬಿಡಬೇಕು.

ಆ ನಂತರ, ಇಮಾಮನು ಎತ್ತರವಾದ ಧ್ವನಿಯಿಂದ ಮತ್ತು ಹಿಂಬಾಲಕರು ಬಾಯಲ್ಲಿಯೇ, "ಅಸ್ಸಲಾಮು ಅಲೈಕುಮ್ ರ್ಹಮತುಲ್ಲಾಹ್" ಅಂತಾ ಅನ್ನುತ್ತ ಮೊದಲು ಬಲಗಡೆಗೆ, ಆ ನಂತರ ಎಡಗಡೆಗೆ ಮುಖವನ್ನು ಹೊರಳಿಸಬೇಕು. ಇಲ್ಲಿಗೆ **ನಮಾಜೆ-ಜನಾಜಾ ಮುಗಿದಂತಾಯಿತು.**

(೭) ನಮಾಜವು ಮುಗಿದ ನಂತರ ಡೋಲಿಯನ್ನು ಕಬರಸ್ತಾನದೊಳಗೆ ಒಯ್ದು, ಗೋರಿಯ ಪಶ್ಚಿಮ ದಂಡೆಯ ಹತ್ತಿರ ಇಡಬೇಕು. ನಂತರ, ಇಬ್ಬರು ಗೋರಿಯಲ್ಲಿ ಇಳಿದು, ಗೋರಿಯಲ್ಲಿಯ ಕಲ್ಲು ಹರಳುಗಳನ್ನು ತೆಗೆದು, ಮೃತದೇಹವನ್ನು ಸಾವಕಾಶವಾಗಿ ಗೋರಿಯಲ್ಲಿ ಇಳಿಸಿಕೊಳ್ಳಬೇಕು. ಹೀಗೆ ಇಳಿಸಿಕೊಳ್ಳುವಾಗ, "ಬಿಸ್ಮಿಲ್ಲಾಹಿ, ಬಿಸ್ಮಿಲ್ಲಾಹಿ, ವ ಅಲಾ ಮಿಲ್ಲತಿ ರಸೂಲ್ಲುಲ್ಲಾಹಿ" ಅಂತಾ ಪಠಿಸುತ್ತಿರಬೇಕು. ಪಶ್ಚಿಮ ದಿಕ್ಕಿಗೆ ಮುಖವಾಗುವಂತೆ ಮೃತದೇಹವನ್ನು ಬಲಮಗ್ಗಲದ ಮೇಲೆ ಮಲಗಿಸಬೇಕು. ಹೀಗೆ ಮಲಗಿಸಿದ ನಂತರ, ಕಫನದ ಮೇಲೆ ಕಟ್ಟಿರುವ ಮೂರೂ ಕಸಿಗಳನ್ನು ಬಿಚ್ಚಬೇಕು. ನಂತರ, ಮೃತದೇಹದ ಸುತ್ತಲೂ ಮೃದುವಾದ ಮಣ್ಣನ್ನು ಸುರುವುತ್ತ, ದೇಹವನ್ನು ಮಣ್ಣಿನಿಂದ ಮುಚ್ಚಬೇಕು. ಇಷ್ಟಾದ ನಂತರ ಗೋರಿಯಲ್ಲಿ ಇಳಿದವರು ಗೋರಿಯನ್ನು ಬಿಟ್ಟು ಮೇಲಕ್ಕೆ ಬರಬೇಕು. ತದನಂತರ, ಕೂಡಿದ ಜನರೆಲ್ಲರೂ ಕೈಗಳಲ್ಲಿ ಮಣ್ಣು ತೆಗೆದುಕೊಂಡು ಮೂರು ಮೂರು ಸಾರೆ ಗೋರಿಯಲ್ಲಿ ಮಣ್ಣು ಹಾಕಬೇಕು. ಮೊದಲನೇ ಸಾರೆ ಹಾಕುವಾಗ, "ಮಿನ್ಹಾ ಖಲಕ್ನಾಕುಮ್" (ಎಲೋ ಮಾನವನೇ, ಈ ಮಣ್ಣಿನಿಂದಲೇ ನಿನ್ನನ್ನು ಹುಟ್ಟಿಸಿದ್ದೇನೆ) ಎಂಬ ಕುರಾನದ ವಾಕ್ಯವನ್ನು ಪಠಿಸಬೇಕು; ಎರಡನೇ ಸಾರೆ ಹಾಕುವಾಗ, "ವ ಫೀಹಾ-ನಯೀದುಕುಮ್" (ಮತ್ತು ಈ ಮಣ್ಣಿನಲ್ಲಿಯೇ ನಿನ್ನನ್ನು ಲೀನಗೊಳಿಸುವೆನು) ಅಂತಾ ಅನ್ನಬೇಕು; ಮೂರನೇ ಸಾರೆ ಹಾಕುವಾಗ, "ವ ಮಿನ್ಹಾ-ನಖ್ರುಜುಕುಮ್" (ಮತ್ತು ನ್ಯಾಯದಾನದ ಸಮಯದಲ್ಲಿ ಈ ಮಣ್ಣಿ

ನಿಂದಲೇ ನಿನ್ನನ್ನು ಮತ್ತೊಮ್ಮೆ ಎಬ್ಬಿಸುವೆನು) ಅಂತಾ ಅನ್ನಬೇಕು. ಕೂಡಿದ ಜನರೆಲ್ಲರೂ ಮಣ್ಣು ಕೊಟ್ಟ ನಂತರ, ಸಲಿಕೆಯಿಂದ ಮಣ್ಣು ಎಳೆಯುತ್ತ ಗೋರಿಯನ್ನು ಸಂಪೂರ್ಣವಾಗಿ ಮಣ್ಣಿನಿಂದ ತುಂಬಿ, ಗೋರಿಯುದ್ದಕ್ಕೂ ಮಣ್ಣಿನ ಗುಂಪಿಯನ್ನು ಒಟ್ಟಬೇಕು. ನಂತರ ಗುಂಪಿಯ ಮೇಲೆ ನೀರು ಹನಿಸಿ, ಗುಂಪಿಯ ಎರಡೂ ತುದಿಗಳಲ್ಲಿ ಹಸರು ಟೊಂಗೆಗಳನ್ನು ನಾಟಿಸಬೇಕು. ಆ ನಂತರ, ಎಲ್ಲರೂ ಎದ್ದು ನಿಂತು ಫಾತಿಹಾ ಪಠಿಸಬೇಕು. **ಇಲ್ಲಿಗೆ ದಫನ್ ವಿಧಿಯು ಮುಗಿದಂತಾಯಿತು.**

(೮) ದಫನ್ ವಿಧಿಯು ಮುಗಿದ ನಂತರ, ಮೃತನ ಮನೆಯವರು ತಮ್ಮ ಶಕ್ತ್ಯಾನುಸಾರವಾಗಿ ಫಕೀರರಿಗೆ ದಾನ ಧರ್ಮಾದಿಗಳನ್ನು ನೀಡಬೇಕು. ಇದಾದ ನಂತರ ಕಬರಸ್ತಾನವನ್ನು ಬಿಟ್ಟು ಎಲ್ಲರೂ ಹೊರಗೆ ಬರಬೇಕು. ಹೊರಗೆ ಬರುವಾಗ, "ಅಸ್ಸಲಾಮು ಅಲೈಕುಮ್ ಯಾ ಅಹ್ಲಲ್ ಕುಬೂರ್; ವ ಇನ್ನಾ ಇನ್‌ಶ್ಯಾ ಅಲ್ಲಾಹು, ಬಿಕುಮ್ ಲಾಹಿಕೂನ್" (ಎಲೈ ಗೋರಿಗಳಲ್ಲಿದ್ದವರೇ, ನಿಮಗೆ ಪರಮಾತ್ಮನ ಅನುಗ್ರಹವಾಗಲಿ! ಪರಮಾತ್ಮನ ಇಚ್ಛೆಯಾಗುತ್ತಲೇ, ನಾವೂ ಸಹ ಇಲ್ಲಿಗೆ ಬಂದು ನಿಮ್ಮನ್ನು ಕೂಡಿಕೊಳ್ಳುವೆವು) ಅಂತಾ ಪಠಿಸಬೇಕು. ಕಬರಸ್ತಾನವನ್ನು ಬಿಟ್ಟ ನಂತರ, ಎಲ್ಲರೂ ಕೂಡಿ ಮೃತನ ಮನೆಗೆ ಹೋಗಿ, ಮನೆಯ ಮುಂದೆ ನಿಂತು ಫಾತಿಹಾ ಪಠಿಸಿ, "ಹೇ ಪರಮಾತ್ಮಾ, ಮೃತನ ಆತ್ಮಕ್ಕೆ ಶಾಂತಿಯನ್ನೊದಗಿಸು; ಮತ್ತು ಅವನ ಆಪ್ತೇಷ್ಟರಿಗೆ ಸಮಾಧಾನವನ್ನು ನೀಡು" ಅಂತಾ ಪ್ರಾರ್ಥಿಸಬೇಕು. ನಂತರ, ಮನೆಯವರ ಕೂಡ ಕುಳಿತು, ನಾಲ್ಕು ಧೈರ್ಯದ ಮತ್ತು ಸಮಾಧಾನದ ಮಾತುಗಳನ್ನು ಹೇಳಿ, ಅವರಿಗೆ ಸಹಾನುಭೂತಿಯನ್ನು ತೋರಿಸಬೇಕು. ಓಣಿಯವರು ಮತ್ತು ಆಪ್ತಮಿತ್ರರು ತಮ್ಮ ತಮ್ಮ ಮನೆಗಳಿಂದ ಪಕ್ವಾನ್ನಗಳನ್ನು ತೆಗೆದುಕೊಂಡು ಮೃತನ ಮನೆಗೆ ಹೋಗಿ, ಮೃತನ ಮನೆಯವರನ್ನು ಕೂಡಿಕೊಂಡು ಭೋಜನ ಮಾಡಬೇಕು.

### —(೧೩) ಜಿಯಾರತ್—

ಶಿಷ್ಯ:—"ಜಿಯಾರತ್" ಅಂದರೆ ಏನು ?

ಗುರು:—ಜಿಯಾರತ್ ಅಂದರೆ "ಭೆಟ್ಟಿಯಾಗುವಿಕೆ" ಅಂತಾ ಅರ್ಥ

ವಾಗುತ್ತದೆ. ಆದರೆ, ಇಸ್ಲಾಮ್ ಧರ್ಮದಲ್ಲಿ ಇದಕ್ಕೆ ಒಂದು ವಿಶಿಷ್ಟವಾದ ಅರ್ಥವಿದೆ. ಕಬರಸ್ತಾನಕ್ಕೆ ಹೋಗಿ, ಅಥವಾ ಸತ್ಪುರುಷರ ದರಗಾಹ್‌ಗಳಿಗೆ ಹೋಗಿ, ಅಲ್ಲಿ ಪ್ರಶಾಂತತೆಯಿಂದ ಮಲಗಿರುವ ಮೃತರಾದವರನ್ನು ರೂಹಾನೀ ರೀತಿಯಿಂದ (ಅಂದರೆ ಆತ್ಮೀಯವಾಗಿ) ಭೆಟ್ಟಿಯಾಗಿ, ಅವರ ಕಲ್ಯಾಣ ಮತ್ತು ಅಭ್ಯುದಯಗಳಿಗಾಗಿ ಪರಮಾತ್ಮನನ್ನು ಪ್ರಾರ್ಥಿಸುವದಕ್ಕೆ "ಜಿಯಾರತ್" ಅನ್ನುತ್ತಾರೆ. ಜಿಯಾರತಕ್ಕಾಗಿ ಹೋಗುವಾಗ ಮಡಿವಸ್ತ್ರ ಯುಳ್ಳವರಾಗಿ ಪುಷ್ಪಗಳನ್ನು ಮತ್ತು ಊದು ಊದಬತ್ತಿ ಮೊದಲಾದ ಸುಗಂಧಾದಿಗಳನ್ನು ತೆಗೆದುಕೊಂಡು ಹೋಗಬೇಕು. ಕಬರಸ್ತಾನದೊಳಗೆ ಪ್ರವೇಶಿಸುತ್ತಲೇ ಹೀಗೆ ಅನ್ನಬೇಕು—

"ಅಸ್ಸಲಾಮು ಅಲೈಕುಮ್ ಅ ಲಿದ್ದಯಾರೆಮ್, ಮಿನಲ್ ಮೂಮಿನೀನ ವಲ್ ಮುಸ್ಲಿಮೀನ್, ಯಗ್ಫಿರುಲ್ಲಾಹು ಲನಾ ವ ಲಕುಮ್, ವ ಇನ್ನಾ ಇನ್‌ಶಾ ಅಲ್ಲಾಹು ಬಿಕುಮ್ ಲಾಹಿಕೂನ್+ ಅಂತುಮ್ ಲನಾ ಫರತಂವ್, ವ ನ್ಹನು ಲಕುಮ್ ತಬವೂನ್; ನಸಅಲುಲ್ಲಾಹ, ಲನಾ ವ ಲಕುಮ್ ಆಫಿಯಾ;"

ಅನು॥ ಎಲೈ ಇಲ್ಲಿರುವಂಥ ಶ್ರದ್ಧಾವಂತರೇ, ಮತ್ತು ಪರಮಾತ್ಮನಾಜ್ಞಾಪಾಲಕರೇ, ನಿಮ್ಮೆಲ್ಲರಿಗಾಗಿ ಪರಮಾತ್ಮನ ಅನುಗ್ರಹವಾಗಲಿ! ನಿಮ್ಮೆಲ್ಲರನ್ನೂ ಮತ್ತು ಜೀವಂತಾಗಿರುವ ನಮ್ಮನ್ನೆಲ್ಲರನ್ನೂ ಪರಮಾತ್ಮನು ಕ್ಷಮಿಸಲಿ! ಪರಮಾತ್ಮನ ಇಚ್ಛೆಯಾಗುತ್ತಲೇ ನಾವೂ ಸಹ ಇಲ್ಲಿಗೆ ಬಂದು ನಿಮ್ಮನ್ನು ಕೂಡಿಕೊಳ್ಳುತ್ತೇವೆ. ನಮಗಾಗಿ, ನೀವುಗಳು "ಮುಂದಿನವರಾ"ಗಿದ್ದೀರಿ; ಮತ್ತು ನಿಮಗಾಗಿ, ನಾವು "ಹಿಂಬಾಲಕರು" ಆಗತಕ್ಕವರಿದ್ದೇವೆ. ನಮ್ಮೆಲ್ಲರ ಮತ್ತು ನಿಮ್ಮೆಲ್ಲರ ಉದ್ಧಾರಕ್ಕಾಗಿ ಪರಮಾತ್ಮನಲ್ಲಿ ನಾವು ಬೇಡಿಕೊಳ್ಳುತ್ತೇವೆ."

ಮೇಲಿನಂತೆ ಪಠಿಸಿದ ನಂತರ, ಯಾವದಾದರೊಂದು ಗೋರಿಯ ಹತ್ತರ ವಿನಯದಿಂದ ಕುಳಿತು ಕುರಾನ ಪಠಣೆಯನ್ನು ಮಾಡಬೇಕು. ಕುರಾನ-ಪಠಣೆ ಮುಗಿದ ನಂತರ, ಸೂರೆ ಫಾತಿಹಾ ಒಂದು ಸಾರೆ, ಸೂರೆ ಅಖ್ಲಾಸ್ ಮೂರು ಸಾರೆ ಮತ್ತು ದರೂದೆ–ಷರೀಫ ಒಂದು ಸಾರೆ ಪಠಿಸಬೇಕು ನಂತರ, "ಹೇ ಪರಮಾತ್ಮಾ ನನ್ನ ಪಠಣೆಯ ಪುಣ್ಯ ಫಲಗಳನ್ನು ಇಲ್ಲಿದ್ದ ಮೃತರಾದವರಿಗೆ ದಯಪಾಲಿಸು. ಹೇ ಕೃಪಾಪತಿಯೇ, ಇವರ

ತಪ್ಪುಗಳೇನಾದರೂ ಇದ್ದರೆ ಇವರನ್ನು ಕ್ಷಮಿಸು. ಹೇ ದಯಾಘನಾ, ಇವರೆಲ್ಲರ ಮೇಲೆ ದಯದೋರು. ಹೇ ಕಾರುಣ್ಯನಿಧಿಯೇ, ಇವರೆಲ್ಲರ ಆತ್ಮಗಳಿಗೆ ಸುಖ ಶ್ಯಾಂತಿಗಳನ್ನೊದಗಿಸು'' ಅಂತಾ ಪರಮಾತ್ಮನಲ್ಲಿ ಬೇಡಿಕೊಳ್ಳಬೇಕು. ನಂತರ "ಸುಬ್ಹಾನ ರಬ್ಬಿಕ ರಬ್ಬಿಲ್-ಇಜ್ಜತಿ ಅಮ್ಮಾ ಯಸಿಫೂನ್, ಸಲಾಮುನ್ ಅಲಲ್ ಮುರ್ಸಲೀನ್, ವಲ್‌ಹಮ್ದು ಲಿಲ್ಲಾಹಿ ರಬ್ಬಿಲ್ ಆಲಮೀನ್," ಅಂತಾ ಅಂದು ಪಠಣೆಯನ್ನು ಮುಗಿಸಬೇಕು. ಕಬರಸ್ತಾನವನ್ನು ಬಿಟ್ಟು ಬರುವಾಗ, ''ಅಸ್ಸಲಾಮು ಅಲೈಕುಮ್ ಅಹ್ಲಲ್ ಕುಬೂರ್'' ಅಂತಾ ಅನ್ನಬೇಕು.

ತನಗೆ ಶಕ್ಯವಾದಾಗೊಮ್ಮೆ—ಕನಿಷ್ಟ ವಾರಕ್ಕೊಂದು ಸಾರೆ—ಪ್ರತಿ ಮುಸ್ಲಿಮನು ಕಬರಸ್ತಾನಕ್ಕೆ ಹೋಗಿ ಜಿಯಾರತ್ ಮಾಡಿ ಬರಬೇಕು. ಆದರೆ, ಹೆಂಗಸರು ಜಿಯಾರತಕ್ಕಾಗಿ ಕಬರಸ್ತಾನಕ್ಕೆ ಹೋಗಬಾರದು.

ಮೃತನಾದವನು ದಫನ್ ಮಾಡಲ್ಪಟ್ಟ ಮೂರನೆಯ ದಿವಸ, ಮೃತನ ಮನೆಯವರು, ಆಪ್ತಮಿತ್ರರನ್ನು ಮತ್ತು ಓಣಿಯವರನ್ನು ಕೂಡಿಕೊಂಡು ಕಬರಸ್ತಾನಕ್ಕೆ ಹೋಗಿ, ಮೃತನ ಜಯಾರತ್ ಮಾಡಿಕೊಂಡು ಬರಬೇಕು.

# — ೪ ನೇ ಭಾಗ —

## --- ಕುರಾನದಲ್ಲಿಯ ಅಧ್ಯಾಯಗಳು ---

(ಟಿಪ್ಪಣಿ:- ಅರಬೀ ಮಜಕೂರವಿದ್ದಲ್ಲಿ, ವಾಕ್ಯವು ಪೂರ್ಣವಾದ ನಂತರ, (+) ಅಧಿಕ ಚಿನ್ಹವನ್ನು ಬರೆಯಲಾಗಿದೆ. ಪೂರ್ಣಗ್ರಾಮ್ ಅಂತಾ ಅದನ್ನು ತಿಳಿಯಬೇಕು.)

### — ಸೂರೆ-ಫಾತಿಹಾ —

ಬಿಸ್ಮಿಲ್ಲಾ ಹಿರ್ರ್ರಹಿಮಾ ನಿರ್ರಹೀಮ್

"ಅಲ್‌ಹಮ್ದು ಲಿಲ್ಲಾಹಿ ರಬ್ಬಿಲ್ ಆಲಮೀನ್; ಅರ್ರಹಮಾ ನಿರ್ರಹೀಮಿ; ಮಾಲಿಕಿ ಯೌಮಿದ್ದೀನ್ + ಇಯ್ಯಾಕ ನಅಬುದು, ವ ಇಯ್ಯಾಕ ನಸ್ತಯೀನ್ + ಇಹ್‌ದಿನಸ್ಸಿರಾತೊಲ್ ಮುಸ್ತಕೀಮ; ಸಿರಾತೊಲ್ಲಜೀನ ಆನ್‌ಅಮ್ತ ಅಲಯ್‌ಹಿಮ್; ಗೈರಿಲ್ ಮಗ್ದೂಬಿ ಅಲಯ್‌ಹಿಮ್ ವಲದ್‌ದ್ದಾ....ಲ್ಲೀನ್ +"

— ಅನುವಾದ —

ಸಕಲ ಸ್ತುತಿಗಳೆಲ್ಲ ಪರಮಾತ್ಮನಿಗೇ ಸಲ್ಲುವವು [ಅಂದರೆ, ಸಕಲ ಶಕ್ತಿ ವಿದ್ಯ ಐಶ್ವರ್ಯಾದಿಗಳಿಗೆಲ್ಲ ಮೂಲಾಧಾರನಾದ ಪರಮಾತ್ಮನೊಬ್ಬನೇ ಸಕಲ ಸ್ತುತಿ ಗಳಿಗೆ ಅರ್ಹನಾಗಿದ್ದಾನೆಯಲ್ಲದೆ, ಅವನ ಹೊರತಾಗಿ ಮತ್ತಾರೂ ಅರ್ಹರಿರುವದಿಲ್ಲ]. ಸಕಲ ಬ್ರಹ್ಮಾಂಡಕ್ಕೆಲ್ಲ ಪರಮಾತ್ಮನೇ ಪ್ರಭುವಾಗಿದ್ದಾನೆ [ಅಂದರೆ, ಸೂರ್ಯ ಚಂದ್ರ ಪೃಥ್ವಿಯಾದಿ ಲೋಕಗಳಿಗೆಲ್ಲ ಪರಮಾತ್ಮನೊಬ್ಬನೇ, ನಿರ್ಮಾಪಕನೂ ಒಡೆಯನೂ ಸಂಚಾಲಕನೂ ಪೋಷಕನೂ ಸಂಹಾರಕನೂ ಆಗಿದ್ದಾನೆ]. ಅಲ್ಲದೆ, ಪರಮಾತ್ಮನು [ಮತ್ತೂ ಹೇಗಿರುವನೆಂದರೆ] ಮಹಾ ದಯಾಘನನೂ ಕಾರುಣ್ಯ-ನಿಧಿಯೂ ಆಗಿದ್ದಾನೆ. ನ್ಯಾಯದಿನದ ಒಡೆಯನಾದರೂ ಅವನೇ ಇದ್ದಾನೆ [ಅಂದರೆ, ಪ್ರಳಯವಾದ ನಂತರ ಸನ್ನಿಹಿತವಾಗುವ "ನ್ಯಾಯದಿನ"ದ ಸಮಯದಲ್ಲಿ ಸಕಲ ಮಾನವರ ನ್ಯಾಯಾನ್ಯಾಯಗಳ ವಿಚಾರಣೆಗಳನ್ನು ಮಾಡಿ, ಅವರವರ ಕರ್ಮಗಳಿಗೆ ತಕ್ಕಂತೆ ಕರ್ಮ—ಫಲಗಳನ್ನು ನೀಡುವಂಥ ನ್ಯಾಯಾಧೀಶ—ಶ್ರೇಷ್ಠನಾಗಿದ್ದಾನೆ].

ಆದ್ದರಿಂದ ಹೇ ಪ್ರಭುವೇ, ನಿನ್ನನ್ನೇ ನಾವು ಸ್ತುತಿಸುತ್ತೇವೆ; ಮತ್ತು [ನಮಗೆ ಬೇಕಾದದ್ದನ್ನೆಲ್ಲ] ನಿನ್ನಿಂದಲೇ ಯಾಚಿಸಿ ಬೇಡುತ್ತೇವೆ.

ಹೇ ಪ್ರಭು, ಯಾವ ಯಾವ ಜನರು ನಿನ್ನ ಪ್ರೇಮಾನುಗ್ರಹಗಳನ್ನು ಪಡೆದು ಪುನೀತರಾದವರೋ, ಅಂಥ ಪುಣ್ಯಾತ್ಮರ ಸನ್ಮಾರ್ಗವನ್ನೇ ನಮಗೆ ತೋರಿಸು, ಅಂದರೆ, ಅಂಥವರ ಮಾರ್ಗದೊಳೇ ನಮ್ಮನ್ನು ನಡೆಯುಹಚ್ಚು. ಆದರೆ, ನಿನ್ನ ಕೋಪಾಗ್ನಿಗೆ ಯಾರು ಆಹುತಿಯಾದಾರೋ, ಮತ್ತು [ನೀನು ತೋರಿಸಿದಂಥ ನೈಜ ಮಾರ್ಗವನ್ನು ತ್ಯಜಿಸಿ] ಯಾರು ದುರ್ಮಾರ್ಗವನ್ನು ಹಿಡಿವರೋ, ಅಂಥ ಅನ್ಯಾಯಿಗಳ ಮಾರ್ಗದಲ್ಲಿ ನಮ್ಮನ್ನು ನಡೆಯುಹಚ್ಚಬೇಡ.

## —ಸೂರೆ ಷಮ್ಸ—

ಬಿಸ್ಮಿಲ್ಲಾ ಹಿರ್ರಹಿಮಾ ನಿರ್ರಹೀಮ್

"ವಷ್ಷಮ್ಸಿ ವದುಹಾಹಾ; ವಲ್-ಕಮರಿ ಇಜಾ ತಲಾಹಾ; ವನ್ನಹಾರಿ ಇಜಾ ಜಲ್ಲಾಹಾ; ವಲ್ಲೈಲಿ ಇಜಾ ಯಗ್ಷಾಹಾ; ವಸ್ಸಮಾ....ಯಿ ವಮಾ ಬನಾಹಾ; ವಲ್‌ಅರ್ದಿ ವಮಾ ತೊಹಾಹಾ; ವ ನಫ್ಸಿಂವ್ವಮಾ ಸವ್ವಾಹಾ; ಫ ಅಲ್‌ಹಮಹಾ ಫುಜೂರಹಾ ವ ತಕ್ವಾಹಾ; ಕದ್ ಅಫ್ಲಹ ಮನ್ ಜಕ್ಕಾಹಾ; ವ ಕದ್ ಖಾಬ ಮನ್ ದಸ್ಸಾಹಾ + ಕಜ್ಜಬತ್ ಸಮೂದು ಬಿ ತೊಗ್‌ವಾಹಾ....; ಇಜಿಂಬಅಸ ಅಷ್ಕಾಹಾ; ಫ ಕಾಲ ಲಹುಮ್ ರಸೂಲ್ಲುಲ್ಲಾಹಿ, ನಾಕತುಲ್ಲಾಹಿ ವ ಸುಕ್‌ಯಾಹಾ + ಫ ಕಜ್ಜಬೂಹು ಫ ಅಕರೂಹಾ; ಫದಮ್‌ದಮ ಅಲೈಹಿಮ್ ರಬ್ಬುಹುಮ್ ಬಿಜಂಬಿಹಿಮ್, ಫ ಸವ್ವಾಹಾ; ವ ಲಾ ಯಖಾಫು ಉಕ್ಬಾಹಾ +"

-ಅನುವಾದ-

ಸೂರ್ಯನ ಸಾಕ್ಷಿಯಾಗಿ, ಸೂರ್ಯಪ್ರಕಾಶದ ಸಾಕ್ಷಿಯಾಗಿ, ಸೂರ್ಯಾಸ್ತವಾದ ನಂತರ ಉದಯವಾಗುವ ಚಂದ್ರನ ಸಾಕ್ಷಿಯಾಗಿ, ಜಗವನ್ನು ಪ್ರಕಾಶಿಸುವ ಹಗಲು ವೇಳೆಯ ಸಾಕ್ಷಿಯಾಗಿ, ಸೂರ್ಯಪ್ರಕಾಶವನ್ನು ಮುಚ್ಚುತ್ತಲಿರ್ದ ರಾತ್ರಿಯ ಸಾಕ್ಷಿಯಾಗಿ, ಆಕಾಶದ ಸಾಕ್ಷಿಯಾಗಿ

ಮತ್ತು ಆಕಾಶ-ನಿರ್ಮಾಪಕನ ಸಾಕ್ಷಿಯಾಗಿ, ಭೂಮಿಯ ಸಾಕ್ಷಿಯಾಗಿ ಮತ್ತು ಭೂಮಿಯನ್ನು ನಿರ್ಮಿಸಿ ಹಾಸಿದವನ ಸಾಕ್ಷಿಯಾಗಿ, ಮಾನವನ ಆತ್ಮಸಾಕ್ಷಿಯಾಗಿ, ಮಾನವನ ಆತ್ಮನನ್ನು ನಿರ್ಮಿಸಿ ಶೃಂಗರಿಸಿದವನ ಸಾಕ್ಷಿಯಾಗಿ, ಮತ್ತು ಮಾನವನಾತ್ಮಕ್ಕೆ ದುರ್ನೀತಿ ಸುನೀತಿಗಳ ಜ್ಞಾನವನ್ನಿತ್ತವನ ಸಾಕ್ಷಿಯಾಗಿ, ನಾನು ಹೇಳುವದೇನೆಂದರೆ:—"ಯಾವನು ತನ್ನ ಆತ್ಮನನ್ನು ಪಾವನಿಸುವನೋ ಅಂಥವನೇ ಕೃತಾರ್ಥನಾಗುವನು; ಆದರೆ, ಯಾವನು ಆತ್ಮವಿಕಾಸವನ್ನು ಹತ್ತಿಕ್ಕುವನೋ ಅಂಥವನು ಮುಕ್ತಿಯನ್ನು ಹೊಂದಲಾರನು."

ಸಮೂದ ಜನಾಂಗದೊಳಗಿನ ಮಹಾ ಪಾಪಿಯೋರ್ವನು [ಪರಮಾತ್ಮನ ಒಂಟೆಯನ್ನು ಕೊಲ್ಲಲು ಸಿದ್ಧನಾಗಿ] ಎದ್ದು ನಿಂತಾಗ, ಸಮೂದರು [ತಮ್ಮ ಮಾರ್ಗದರ್ಶನಕ್ಕಾಗಿಯೇ ಪರಮಾತ್ಮನಿಂದ ಕಳುಹಿಸಲ್ಪಟ್ಟ "ಸಾಲೇಹ್" ನಾಮದ ದೇವಪ್ರವಾದಿಯನ್ನು] ಧಿಃಕರಿಸಿದ್ದರು. "ಎಚ್ಚರ ! ಇದು ಪರಮಾತ್ಮನ ಒಂಟೆ ! ಮತ್ತು ಇದು ಅದರ ಪಾನೀಯವು ! !" ಎಂದು ದೇವಪ್ರವಾದಿಯು ಅವರನ್ನು ಎಚ್ಚರಿಸಿದ್ದನಾದರೂ, ಪ್ರವಾದಿಯ ಮಾತನ್ನು ಧಿಃಕ್ಕರಿಸಿ ಅವರು ಒಂಟೆಯನ್ನು ಕೊಂದು ಹಾಕಿದ್ದರು. ಆದ್ದರಿಂದ, ಅವರ ಪಾಪಕ್ಕಾಗಿ ಪರಮಾತ್ಮನು ಅವರೆಲ್ಲರನ್ನೂ ಸಾಮೂಹಿಕವಾಗಿ ನಾಶಗೊಳಿಸಿದನು; ಮತ್ತು ಅವರ ಪರಿಣಾಮದ ಬಗ್ಗೆ ಪರಮಾತ್ಮನಿಗೆ ಯಾವದೇ ತರದ ಸಂಕೋಚವೆನಿಸಲಿಲ್ಲ.

## —ಸೂರೆ ಕದ್ರ—

ಬಿಸ್ಮಿಲ್ಲಾ ಹಿರ್ರಹಿಮಾ ನಿರ್ರಹೀಮ್

"ಇನ್ನಾ.... ಅನ್‌ಜಲ್ನಾಹು ಫೀ ಲೈಲತಿಲ್ ಕದ್ರಿ; ವಮಾ.... ಅದ್ರಾಕ ಮಾ ಲೈಲತುಲ್-ಕದ್ರು + ಲೈಲತುಲ್-ಕದ್ರಿ; ಖೈರುಮ್ಮಿನ್ ಅಲ್ಫಿ ಷಹರ್ + ತನಜ್ಜಲುಲ್ ಮಲಾ....ಯಿಕತು ವರ್ರೂಹು ಫೀಹಾ, ಬಿ ಇಜ್ನಿ ರಬ್ಬಿಹಿಮ್, ಮಿನ್ ಕುಲ್ಲಿ ಅಮ್ರಿನ್; ಸಲಾಮ್ + ಹಿಯ ಹತ್ತಾ ಮತ್ಲಯಿಲ್-ಫಜ್ರ +"

—ಅನುವಾದ—

[ಎಲೋ ನನ್ನ ಪ್ರವಾದಿಯಾದ ಮುಹಮ್ಮದನೇ!] ಕುರಾನ ಗ್ರಂಥವನ್ನು

ನಿಶ್ಚಯವಾಗಿಯೂ, ಈ ಸನ್ಮಾನ್ಯವಾದ ರಾತ್ರಿಯಲ್ಲಿ ಕಳಿಸಿರುವೆನು. ಈ ಸನ್ಮಾನ್ಯವಾದ ರಾತ್ರಿಯು ಎಂಥದೆಂಬುದು ನಿನಗೆ ಗೊತ್ತಿದೆಯೋ ? [ಅದರ ಶ್ರೇಷ್ಠತ್ವವು ಎಂಥದಿರುವದೆಂದರೆ] ಸಾವಿರ ಮಾಸಗಳಿಗಿಂತಲೂ ಶ್ರೇಷ್ಠತೆಯಲ್ಲಿ ಅದು ಮಿಗಿಲಾದದ್ದು ಇರುವದು ! ಎಲ್ಲ ಸತ್ಕರ್ಮಗಳನ್ನು ಸಫಲಿಸುವವಕ್ಕೋಸ್ಕರ ತಮ್ಮೊಡೆಯನಾದ ಪರಮಾತ್ಮನ ಆಜ್ಞಾನುಸಾರವಾಗಿ, ದೇವದೂತರು ಮತ್ತು ಪವಿತ್ರಾತ್ಮರು ಈ ರಾತ್ರಿಯಲ್ಲಿ [ಆಕಾಶದಿಂದ ಭೂಲೋಕಕ್ಕೆ] ಇಳಿದು ಬರುವರು. ಅಲ್ಲದೆ, ಈ ರಾತ್ರಿಯು [ಪವಿತ್ರತೆಯಲ್ಲಿ] ಅಕ್ಷಯವಾದ ರಾತ್ರಿಯಾಗಿದೆ; ಮತ್ತು ಬೆಳಗು ಹರಿಯುವ ವರೆಗೂ [ಇದರ ಪವಿತ್ರತೆಯು ಸತತವಾಗಿ] ಇರುವದು.

## —ಸೂರೆ ಜಿಲ್‌ಜಾಲ್—

ಬಿಸ್ಮಿಲ್ಲಾ ಹಿರ್ರಹಿಮಾ ನಿರ್ರಹೀಮ್

"ಇಜಾಜುಲ್ ಜಿಲತಿಲ್-ಅರ್ದು ಜಿಲ್‌ಜಾಲಹಾ; ವ ಅಖ್ರಜತಿಲ್ ಅರ್ದು ಅಸ್ಕಾಲಹಾ; ವ ಕಾಲಲ್-ಇನ್ಸಾನು ಮಾ ಲಹಾ + ಯೌಮಯಿಜಿನ್ ತುಹದ್ದಿಸು ಅಖ್ಬಾರಹಾ; ಬಿ ಅನ್ನ ರಬ್ಬಕ ಔಹಾಲಹಾ + ಯೌಮಯಿ ಜಿಂಯ್ ಯಸ್ದುರುನ್ನಾಸು, ಅಷ್ತಾತಲ್ಲಿ ಯುರೌ ಅಅಮಾಲಹುಮ್; ಫ ಮಂಯ್ಯಅಮಲ್ ಮಿಸ್ಕಾಲ ಜಪ್ರತಿನ್ ಖೈರಂಯ್ಯರಹ್; ವ ಮಂಯ್ಯಅಮಲ್ ಮಿಸ್ಕಾಲ ಜರ್ರತಿನ್ ಷರ್ರಂಯ್ಯರಹ್ +"

### -ಅನುವಾದ-

[ಪ್ರಳಯ ಕಾಲವು ಸನ್ನಿಹಿತವಾಗುತ್ತಲೆ] ಭೂಕಂಪಿನಿಂದ ಭೂಮಿಯು ಗದಗದನೆ ನಡುಗುವಾಗ, ಮತ್ತು ತನ್ನ ಒಡಲಲ್ಲಿರುವ ವಸ್ತುಗಳನ್ನು ಭೂಮಿಯು ಹೊರಚೆಲ್ಲಿದಾಗ, "ಈ ಭೂಮಿಗೆ ಏನಾಗಿರುವದು ?" ಎಂದು ಮಾನವನು ಆಶ್ಚರ್ಯಚಕಿತನಾಗಿ ಉದ್ಗಾರ ತೆಗೆಯುವನು! ಆ ದಿವಸ (ಅಂದರೆ, ನ್ಯಾಯದಾನದ ದಿವಸ) ಭೂಮಿಯು [ಪ್ರತಿಯೊಬ್ಬನ ವಿಷಯವಾಗಿ ಪರಮಾತ್ಮನ ಮುಂದೆ] ತನ್ನ ಇತಿಹಾಸವನ್ನು ಹೇಳುವದು; ಯಾಕೆಂದರೆ, ಪರ

ಮಾತ್ಮನು ಅವಕ್ಕೆ ಹಾಗೆ ಆಜ್ಞೆಯನ್ನೀಯುವನು. ಆಗ, ತಮ್ಮ ತಮ್ಮ ಕರ್ಮಗಳನ್ನು ನೋಡುವದಕ್ಕಾಗಿ ಮಾನವರು ಗುಂಪುಗುಂಪಾಗಿ ಕೂಡು ವರು. ರವವಷ್ಟಾದರೂ ಸುಕರ್ಮವನ್ನು ಮಾಡಿದವನು, ಅದನ್ನು ಆಗ ಕಣ್ಣಾರೆ ನೋಡಿಕೊಳ್ಳುವನು; ರವದಷ್ಟಾದರೂ ದುಷ್ಕರ್ಮವನ್ನು ಮಾಡಿ ದವನು ಸಹ, ತನ್ನ ದುಷ್ಕರ್ಮವನ್ನು ಕಣ್ಣಾರೆ ನೋಡಿಕೊಳ್ಳುವನು.

## —ಸೂರೆ—ಆದಿಯಾತ್—

ಬಿಸ್ಮಿಲ್ಲಾ ಹಿರ್‍ರಹಿಮಾ ನಿರ್‍ರಹೀಮ್

"ವಲ್‌ಆದಿಯಾತಿ ದೊಬ್‌ಹನ್; ಫಲ್‌ಮೂರಿಯಾತಿ ಕದ್‌ಹನ್; ಫಲ್‌ಮುಗೀರಾತಿ ಸುಬ್‌ಹನ್; ಫ ಅಸರ್ನಬಿಹಿ ನಕ್‌ಅನ್; ಫ ವಸತ್ನ ಬಿಹಿ ಜಮ್‌ಅನ್; ಇನ್ನಲ್-ಇನಸ್ಸನ ಲಿರಬ್ಬಿಹಿ ಲಕನೂದ್; ವ ಇನ್ನಹು ಅಲಾ ಜಾಲಿಕ ಲಷಹೀದ್; ವ ಇನ್ನಹು ಲಿ ಹುಬ್ಬಿಲ್-ಖೈರಿ ಲಷದೀದ್ + ಅಫಲಾ ಯಾಅಲಮು, ಇಜಾ ಬುಅಸಿರ ಮಾಫಿಲ್-ಕುಬೂರ್; ವ ಹುಸ್ಸಿಲ ಮಾಫಿಸ್ಸದೂರ್; ಇನ್ನ ರಬ್ಬಹುಂಬಿಹಿಮ್ ಯೌಮಯಿಜಿಲ್-ಲಖಬೀರ್ +"

-ಅನುವಾದ-

[ಧರ್ಮಯುದ್ಧಕ್ಕಾಗಿ] ಹೇಂಕರಿಸುತ್ತ ಓಡುವಂಥ ಕುದುರೆಗಳ ಸಾಕ್ಷಿ ಯಾಗಿ, [ಕಲ್ಲುಗಳ ಮೇಲೆ] ಖುರಗಳನ್ನಪ್ಪಳಿಸಿ ಕಿಡಿಗಳನ್ನೆಬ್ಬಿಸುವಂಥ ಕುದು ರೆಗಳ ಸಾಕ್ಷಿಯಾಗಿ, ನಸುನಸುಕಿನಲ್ಲಿ [ವೈರಿಗಳ ಮೇಲೆ] ಹಲ್ಲೆ ಮಾಡುವಂಥ ಕುದುರೆಗಳ ಸಾಕ್ಷಿಯಾಗಿ, [ಓಡುತ್ತ ಓಡುತ್ತ] ನೆಲದಿಂದ ಧೂಳಿಯನ್ನೆಬ್ಬಿಸು ವಂಥ ಕುದುರೆಗಳ ಸಾಕ್ಷಿಯಾಗಿ, ಮತ್ತು [ಧಾವಿಸಿ ಓಡುತ್ತ] ವೈರಿಸಮುದಾ ಯವನ್ನು ಭೇದಿಸುವಂಥ ಕುದುರೆಗಳ ಸಾಕ್ಷಿಯಾಗಿ ನಾನು ಹೇಳುವದೇ ನೆಂದರೆ:— "ನಿಶ್ಚಯವಾಗಿಯೂ, ಮಾನವನು ತನ್ನೊಡೆಯನಾದ ಪರಮಾ ತ್ಮನಿಗೆ ಕೃತಘ್ನನಾಗಿರುವನು. ಪರಮಾತ್ಮನಿಗೆ ಕೃತಘ್ನನಾಗಿರುವನೆಂಬು ದಕ್ಕೆ ಮಾನವನು ನಿಸ್ಸಂದೇಹವಾಗಿ ಸ್ವತಃ ತಾನೇ ಸಾಕ್ಷಿಯಾಗಿರುವನು. [ಧರ್ಮಯುದ್ಧದ ಕಾಲದಲ್ಲಿಯೂ ಸಹ] ದ್ರವ್ಯದ ಮೋಹದೊಳೇ ಮಾನವನು

ಮಗ್ನನಾಗಿರುವನು! [ನ್ಯಾಯದಿನದ ಆ ಸಮಯದಲ್ಲಿ] ಪರಮಾತ್ಮನು ಗೋರಿಗಳಲ್ಲಿ ಇದ್ದವರೆಲ್ಲರನ್ನು ಜೀವದುಂಬಿಸಿ ಎಬ್ಬಿಸುವನೆಂಬುದನ್ನೂ, ಅವರವರ ಮನಗಳಲ್ಲಿದ್ದ ಗುಟ್ಟುಗಳನ್ನೆಲ್ಲ ಪರಮಾತ್ಮನು ಆಗ ಬಹಿರಂಗ ಪಡಿಸುವನೆಂಬುದನ್ನೂ, ಮತ್ತು ಎಲ್ಲರ ವೃತ್ತಾಂತವನ್ನು ಪರಮಾತ್ಮನು ಆಗ ಗುರ್ತಿಸುವನೆಂಬುದನ್ನೂ ಮಾನವನು ತಿಳಿಯಲಾರನೇ !

## —ಸೂರೆ ಅಲ್-ಕಾರಿಅತ—

ಬಿಸ್ಮಿಲ್ಲಾ ಹಿರ್ರಹಿಮಾ ನಿರ್ರಹೀಮ್

"ಅಲ್-ಕಾರಿಅತು ಮಾಲ್-ಕಾರಿಅಃ ; ವಮಾ.... ಅದ್ರಾಕ ಮಾಲ್‌ಕಾರಿಅಃ + ಯೌಮ, ಯಕೂನುನ್ನಾಸು ಕಾಲ್-ಫರಾಷಿಲ್ ಮಬ್ಸೂಸ್; ವ ತಕೂನುಲ್ ಜಿಬಾಲು ಕಲ್-ಇಹ್‌ನಿಲ್ ಮನ್‌ಫೂಷ್ + ಫ ಅಮ್ಮಾ, ಮನ್ ಸಕುಲತ್ ಮವಾಜೀನುಹು; ಫಹುವ ಫೀ ಐಷತಿರ್ ರಾದಿಯಃ + ಫ ಅಮ್ಮಾ, ಮನ್ ಖಫ್ಫತ್ ಮವಾಜೀನುಹು; ಫ ಉಮ್ಮುಹು ಹಾವಿಯಃ + ವಮಾ.... ಅದ್ರಾಕ ಮಾ ಹಿಯಃ + ನಾರುನ್ ಹಾಮಿಯಃ +"

-ಅನುವಾದ-

[ಎಲೋ ನನ್ನ ಪ್ರವಾದಿಯಾದ ಮಹಮ್ಮದನೇ ಏನು ?] ಖಡ್ ಖಡಲ್ ಎನ್ನುವ ಆ ಖಡಾಡಿಸುವಂಥದೇ ? ಆ ಖಡ್‌ಖಡಲ್ ಎನ್ನುವಂತಹದು ಏನೆಂಬುದು ನಿನಿಗೆ ಗೊತ್ತಿಲ್ಲವೇ ? ಪ್ರಳಯದಿನವು ಅದು ! ಆ ಪ್ರಳಯ ದಿನದ ಸಮಯದಲ್ಲಿ ಮಾನವರ ಪರಿಸ್ಥಿತಿಯು ಹೇಗಾಗುವದೆಂದರೆ, ದಿಕ್ಕುಗಾಣದೆ, ಹೈರಾಣದಿಂದ ಪರಿತಪಿಸುವ ಪತಂಗಗಳಂತಾಗುವದು ! ಮತ್ತು ಗಿರಿಗಳು ಆಗ ಬಿರಿದು ಬಿರಿದು, ಹಿಂಜಿದ ಅರಳೆಯಂತೆ ಛಿನ್ನವಿಛಿನ್ನವಾಗುವವು ! ನಂತರ [ನ್ಯಾಯತಕ್ಕಡಿಯಲ್ಲಿ ತೂಗಲ್ಪಟ್ಟಾಗ] ಯಾವನ ಪುಣ್ಯ-ಪರಡಿಯು ಭಾರವಾಗುವದೋ, ಅಂಥವನು [ಸ್ವರ್ಗವನ್ನು ಪಡೆದು] ಸುಖಿಯಾಗುವನು; ಆದರೆ, ಯಾವನ ಪುಣ್ಯ-ಪರಡಿಯು ಹಗುರಾಗುವದೋ, ಅಂಥವನು ಕುಂಡದೊಳು ಬೀಳುವನು. [ಎಲೋ ನನ್ನ ಪ್ರವಾದಿಯೇ!] ಆ ಕುಂಡ

ವೆಂದರೆ ಏನು ಎಂಬುದು ನಿನಿಗೆ ಗೊತ್ತಿ ದೆಯೋ ? [ಪಾಪಿಗಳಿಗಾಗಿ ಪರಮಾ ತ್ಮನು ಹೊತ್ತಿಸಿದಂಥ] ಧಗಧಗಿಸುತ್ತಿರುವ ನರಕದಗ್ನಿ ಅದು !

## —ಸೂರೆ ತಕಾಸುರ್—

ಬಿಸ್ಮಿಲ್ಲಾ ಹಿರ್ರಹಿಮಾ ನಿರ್ರಹೀಮ್

"ಅಲ್-ಹಾಕುಮುತ್ತಕಾಸುರು, ಹತ್ತಾ ಜುರ್ತುಮುಲ್ ಮಕಾಬಿರ್ + ಕಲ್ಲಾ, ಸೌಫ ತಅಲಮೂನ; ಸುಮ್ಮ ಕಲ್ಲಾ, ಸೌಫ ತಅಲಮೂನ್ + ಕಲ್ಲಾ, ಲೌ ತಅಲಮೂನ ಇಲ್ಮಲ್-ಯಕೀನ್ + ಲತರವುನ್ನಲ್-ಜಹೀಮ್; ಸುಮ್ಮ, ಲತರವುನ್ನಹಾ ಐನಲ್ ಯಕೀನ್ + ಸುಮ್ಮ, ಲತಸ್ಅಲುನ್ ಯೌಮಯಿಜಿನ್, ಅನಿನ್ನಯೀಮ್ +"

—ಅನುವಾದ—

[ಎಲೈ ಮಾನವರೇ] ಅತಿಯಾದ ಲೌಕಿಕ ಮೋಹವು ನಿಮ್ಮನ್ನು ಮೋಕ್ಷದ ಗುರಿಯಿಂದ ವಿಮುಖರನ್ನಾಗಿ ಮಾಡುವದು. ನೀವು ಗೋರಿಗ ಳನ್ನು ಮುಟ್ಟುವ ವರೆಗೂ (ಅಂದರೆ, ಮರಣ ಪರಿಯಂತರವೂ) ನಿಮ್ಮನ್ನು ವಿಮುಖರನ್ನಾಗಿ ಮಾಡುವದು. [ಮರಣಾ ನಂತರ] ಕ್ಷಣದಲ್ಲಿಯೇ ಈ ಮಾತು ನಿಮಗೆ ಗೊತ್ತಾದೀತು ! ಮತ್ತೆ ಕೇಳಿರಿ ! ಕ್ಷಣದಲ್ಲಿಯೇ ಈ ಮಾತು ನಿಮಗೆ ಗೊತ್ತಾದೀತು !! ಆದ್ದರಿಂದ ಇದು ಲೇಸಲ್ಲ. ನಿಜವಾದ ಜ್ಞಾನಬಲದಿಂದ ಈ ಸತ್ಯವನ್ನು ಅರಿತವರಾಗಿದ್ದರೆ, ನೀವು ಇಂತಾಗುತ್ತಿ ದ್ದಿಲ್ಲ. [ಈಗಿದ್ದಂತೆ ಮುಂದೆಯೂ ಸಹ ನೀವು ಹೀಗೇಯೆ ಇದ್ದದ್ದಾದರೆ] ನರಕ ವನ್ನು ಕಂಡೀರಿ ! ಮತ್ತೊಮ್ಮೆ ಕೇಳಿರಿ ! ನರಕವನ್ನು ನೀವು ನಿಶ್ಚಯವಾ ಗಿಯೂ ಕಣ್ಣಾರೆ ಕಂಡೀರಿ !! ಮತ್ತೂ ಕೇಳಿರಿ ! ದೇವದತ್ತ ಅನುಗ್ರಹಗಳ ಬಗ್ಗೆ (ಅಂದರೆ, ಪರಮಾತ್ಮನು ದಯಪಾಲಿಸಿದಂಥ ಪಂಚೇಂದ್ರಿಯಗಳನ್ನು ಯಾವ ರೀತಿಯಾಗಿ ನೀವು ಉಪಯೋಗಿಸಿದಿರಿ ಎಂಬುದರ ಬಗ್ಗೆ) ನ್ಯಾಯ ದಿನದ ಸಮಯದಲ್ಲಿ ನೀವು ಪ್ರಶ್ನಿಸಲ್ಪಟ್ಟೀರಿ !!

## —ಸೂರೆ ಅಸ್ರ—

ಬಿಸ್ಮಿಲ್ಲಾ ಹಿರ್ರಹಿಮಾ ನಿರ್ರಹೀಮ್

"ವಲ್-ಅಸ್ರಿ ಇನ್ನಲ್-ಇನಸ್ಸಿನ ಲಫೀ ಖುಸ್ರಿನ್; ಇಲ್ಲಲ್ಲಜೀನ ಆಮನೂ ವ ಅಮಿಲುಸ್‌ಸ್ವಾಲಿಹಾತಿ; ವತವಾಸೌ ಬಿಲ್-ಹಕ್ಕಿ ವತವಾಸೌ ಬಿಸ್ಸೊಬ್ರು +"

-ಅನುವಾದ-

[ಎಲೈ ಮಾನವರೇ] ಸಂಧ್ಯಾಕಾಲದ ಸಾಕ್ಷಿಯಾಗಿ ನಾನು ಹೇಳುವದೇನೆಂದರೆ,— "ಶ್ರದ್ಧಾವಂತರ ಹೊರತಾಗಿ, ಸತ್ಕರ್ಮಿಗಳ ಹೊರತಾಗಿ, ಪರಸ್ಪರರಲ್ಲಿ ಸತ್ಯವನ್ನಾಚರಿಸುವವರ ಹೊರತಾಗಿ ಮತ್ತು ಪರಸ್ಪರರಲ್ಲಿ ಸಹನಶೀಲತೆಯನ್ನು ತೋರಿಸುವವರ ಹೊರತಾಗಿ, ಉಳಿದ ಮಾನವರೆಲ್ಲರೂ ಹಾನಿಯಲ್ಲಿರುವರು (ಅಂದರೆ, ಮಾನವ ಜನ್ಮದಲ್ಲಿ ಲಭ್ಯವಾದ ಕಾಲಾವಧಿಯ ಅಲ್ಪಾವಕಾಶದಿಂದ ಲಾಭವನ್ನು ಹೊಂದರು)

## —ಸೂರೆ ಹಮುಜತ—

ಬಿಸ್ಮಿಲ್ಲಾ ಹಿರ್ರಹೀಮಾ ನಿರ್ರಹೀಮ್

"ವೈಲುಲ್ಲಿ ಕುಲ್ಲಿ ಹುಮಜತಿಲ್ಲು ಮುಜತಿ ನಿಲ್ಲಜೀ ಜಮಅ ಮಾಲಂವ್, ವ ಅದ್ದದಹ್; ಯಹ್‌ಸಬು ಅನ್ನ ಮಾಲಹು.... ಅಖ್ಲದಃ + ಕಲ್ಲಾ, ಲಯುಂಬಜನ್ನ ಫಿಲ್ ಹುತ್ಮಃ + ವ ಮಾ.... ಅದ್ರಾಕ ಮಾಲ್-ಹುತ್ಮಃ + ನಾರುಲ್ಲಾಹಿಲ್-ಮೂಕದತುಲ್ಲತೀ, ತತ್ತಲಿವು ಅಲಲ್ ಅಫ್‌ಯಿದಃ + ಇನ್ನಹಾ ಅಲೈಹಿಮ್-ಮೂಸೊದತುನ್; ಫೀ ಅಮದಿಮ್-ಮುಮದ್ದದಃ +"

-ಅನುವಾದ-

[ಎಲೋ ನನ್ನ ಪ್ರವಾದಿಯಾದ ಮುಹಮ್ಮದನೇ] ಇತರರನ್ನು ದೂಷಿಸುವಂಥ ಮತ್ತು ಅಣಕಿಸಿ ನಿಂದಿಸುವಂಥ ಪ್ರತಿ ಮಾನವನು [ಪರಲೋಕದಲ್ಲಿ]

ಮಹಾ ದುರ್ಗತಿಗೆ ಈಡಾಗುವನು; ಮತ್ತು ಹಣವನ್ನು ಸೇಖರಿಸಿ, ಅವನ್ನು [ಸನ್ಮಾರ್ಗದಲ್ಲಿ ವಿನಿಯೋಗಿಸದೆ] ಮೇಲಿಂದ ಮೇಲೆ ಎಣಿಸುತ್ತ ಕೂಡ್ರು ವಂಥವನು ಸಹ ದುರ್ಗತಿಯನ್ನು ಹೊಂದುವನು. ತನ್ನ ಹಣವು ಸದಾ ಕಾಲದಲ್ಲಿಯೂ ತನ್ನಲ್ಲಿಯೇ ಇರುವದೆಂದು ಅವನು ಭ್ರಾಂತಿಸುವನು. ಆದರೆ, ಹಾಗಾಗುವದು ಶಕ್ಯವಿಲ್ಲ ! ನಿಶ್ಚಯವಾಗಿಯೂ ನರಕ-ಗಾಣದಲ್ಲಿ ಇಂಥ ವನು ನೂಕಲ್ಪಡುವನು ! ! ನರಕ-ಗಾಣವೆಂದರೆ ಏನು ಎಂಬುದು ಗೊತ್ತಿ ರುವದೇ ನಿನಗೆ ಪ್ರವಾದಿಯೇ ? ಅದು, ಪರಮಾತ್ಮನು ಹೊತ್ತಿಸಿದ ನರಕಾ ಗ್ನಿಯು ! ಹೃದಯಗಳನ್ನು ವ್ಯಾಪಿಸುವದು ! ! ಆ ನರಕಾಗ್ನಿಯ ಉದ್ದುದ್ದ ಸ್ತಂಭಗಳು ಸುತ್ತೂಕಡೆಗಳಿಂದ ಇಂಥ ಜನರನ್ನು ಹತ್ತಿಕ್ಕುವವು.

## —ಸೂರೆ ಫೀಲ್—

ಬಿಸ್ಮಿಲ್ಲಾ ಹಿರ್‍ರಹಿಮಾ ನಿರ್‍ರಹೀಮ್

"ಅಲಮ್ ತರ ಕೈಫ ಫಅಲ ರಬ್ಬುಕ ಬಿ ಅಸ್ಹಾಬಿಲ್-ಫೀಲ್ + ಅಲಮ್ ಯಜ್‌ಅಲ್, ಕೈದಹುಮ್ ಫೀ ತದ್ಲೀಲಿಂವ್; ವ ಅರ್ಸಲ ಅಲೈಹಿಮ್ ತೊಯ್‌ರನ್ ಅಬಾಬೀಲ್; ತರಮೀಹಿಮ್ ಬಿ ಹಿಜಾರತಿಮ್ಮಿನ್ ಸಿಜ್ಜೀಲಿನ್; ಫಜಅಲಹುಮ್ ಕಅಸ್‌ಫಿಮ್ಮಾಕೂಲ್ +"

-ಅನುವಾದ-

[ಎಲೋ ನನ್ನ ಪ್ರವಾದಿಯಾದ ಮುಹಮ್ಮದನೇ, ಕಾಬಾ ಮಂದಿರವನ್ನು ವಿಧ್ವಂಸಗೊಳಿಸಬೇಕೆಂದು ದಂಡೆತ್ತಿ ಬಂದಿದ್ದ] ಆ ಗಜವಾನರ ಕೂಡ ನಿನ್ನೊಡೆ ಯನು ಅದೆಂತು ವರ್ತಿಸಿದ್ದನೆಂಬುದು ನಿನಗೆ ಗೊತ್ತಿಲ್ಲವೇ ? ಗಜವಾಹನರ ಆ ಕುಯುಕ್ತಿಯನ್ನು ಪರಮಾತ್ಮನು ಕೆಡಿಸಿ ಹದಗೆಡಿಸಿದ್ದಿಲ್ಲವೇ ? [ಯಾವ ರೀತಿಯಾಗಿ ಹದಗೆಡಿಸಿದ್ದನೆಂದರೆ] ಅವರನ್ನು ಎದುರಿಸಲು ಪರಮಾ ತ್ಮನು [ಆಕಾಶದಿಂದ] ಹಕ್ಕಿಗಳ ಹಿಂಡುಗಳನ್ನು ಕಳುಹಿದ್ದನು; ಮತ್ತು ಆ ಹಕ್ಕಿಗಳು ಹರಳುಗಲ್ಲುಗಳಿಂದ ಆ ಜನರನ್ನು ಹೊಡೆಯುತ್ತಲಿದ್ದವು. ಅಂತಾಗಿ (ಅಂದರೆ, ಆ ಹಕ್ಕಿಗಳ ವತಿಯಿಂದ), ಪರಮಾತ್ಮನು ಆ ಗಜವಾ ಹನರನ್ನೆಲ್ಲ ''ತಿಂದು ಚೆಲ್ಲಿದ ಚಿಪ್ಪಾಡಿ''ಯಂತೆ ಸಂಹರಿಸಿ ಒಗೆದನು.

## —ಸೂರೆ ಕುರೈಷ್—

ಬಿಸ್ಮಿಲ್ಲಾ ಹಿರ್ರಹಿಮಾ ನಿರ್ರಹೀಮ್

"ಲಿ ಈಲಾಫಿ ಕುರೈಷಿನ್; ಇಲಾಫಿಹಿಮ್ ರಿಹ್‌ಲತಶ್ಷಿತಾಃಯಿ ವಸ್ಸೈಯ್‌ಫ್ + ಫಲ್‌ಯಅಬುದೂ, ರಬ್ಬ ಹಾಜಲ್-ಬೈತ್; ಅಲ್ಲಜೀ.... ಅತ್‌ಅಮಹುಮ್ ಮಿನ್ ಜೂಯಿಂವ್; ವ ಆಮನಹುಮ್ ಮಿನ್ ಖೌಫ್ +"

-ಅನುವಾದ-

ಕುರೈಷರ ಸಲುವಾಗಿ (ಅಂದರೆ ಕಾಬಾ ಮಂದಿರದ ಸೇವಕರ ಸಲುವಾಗಿ) ಉದರನಿರ್ವಾಹನೆಯೊಂದು ಇರುವದು ! ಚಳಿಗಾಲದಲ್ಲಿ ಮತ್ತು ಬೇಸಿಗೆಯಲ್ಲಿ [ದೇವಭಕ್ತರ ಮನೆಗಳಿಗೆ ಭಿಕ್ಷೆಗಾಗಿ] ಪ್ರವಾಸ ಕೈಕೊಳ್ಳುವ ಉದರನಿರ್ವಾಹನೆ ಇರುವದು ! ! ಹಸಿವಿಯಲ್ಲಿದ್ದಾಗ ಅನ್ನವನ್ನೂ, ಭೀತಿಯಲ್ಲಿದ್ದಾಗ ಅಭಯಯವನ್ನೂ ಪರಮಾತ್ಮನೇ ಅವರಿಗೆ (ಕುರೈಷರಿಗೆ) ದಯಪಾಲಿಸಿದ್ದಾನೆ ! ಆದ್ದರಿಂದ, ಆ ಕಾಬಾ ಮಂದಿರದ ಒಡೆಯನಾದ ಪರಮಾತ್ಮನನ್ನು ಅವರು ಪೂಜಿಸಲೇಬೇಕು.

## —ಸೂರೆ ಮಾವೂನ್—

ಬಿಸ್ಮಿಲ್ಲಾ ಹಿರ್ರಹಿಮಾ ನಿರ್ರಹೀಮ್

"ಅರಅಯ್‌ತಲ್ಲಜೀ ಯುಕಜ್ಜಿಬು ಬಿದ್ದೀನ್ + ಫ ಜಾಲಿಕಲ್ಲಜೀ ಯದುವ್ವುಲ್-ಯತೀಮ್; ವ ಲಾ ಯಹುದ್ದು ಅಲಾ ತೋಆಮಿಲ್-ಮಿಸ್ಕೀನ್ + ಫ ವೈಲುಲ್ಲಿಲ್ ಮುಸೊಲ್ಲೀನ್; ಅಲ್ಲಜೀನಹುಮ್ ಅನ್ ಸೊಲಾತಿಹಿಮ್ ಸಾಹೂನ್; ಅಲ್ಲಜೀನಹುಮ್ ಯುರಾ....ವೂನ; ವ ಯಮ್ನ್ನವೂನಲ್ಮಾವೂನ್ +"

-ಅನುವಾದ-

[ಎಲೋ ನನ್ನ ಪ್ರವಾದಿಯಾದ ಮುಹಮ್ಮದನೇ] ಧರ್ಮವನ್ನು ಧಿಃಕರಿಸಿ ನಡೆಯುವಂಥ ಮನುಜನ್ನು, ಯಾವನು ಎಂಬುವದನ್ನು ಕಂಡುಹಿಡಿದಿರು

ವಿಯಾ ? [ಇದೋ ನೋಡು!] ಯಾವನು ಅನಾಥ ಮಕ್ಕಳನ್ನು ಬೆದರಿಸು ವನೋ, ಮತ್ತು ನಿರ್ಗತಿಕರಿಗೆ ಅನ್ನವನ್ನೊದಗಿಸಲು ಯಾವನು ಉದ್ಯುಕ್ತ ನಾಗುವಲ್ಲದಿಪ್ಪೋ, ಅವನೇ ಧರ್ಮಲಂಡನು ! ! [ಮತ್ತೂ ಕೇಳು] ಯಾವನು ನೇಮಿತವಾದ ವೇಳೆಗೆ ಸರಿಯಾಗಿ ನಮಾಜಗಳನ್ನು ಅರ್ಪಿಸುವವನ್ನು ತಪ್ಪಿ ಸುವನೋ, ವಲ್ಲದ ಮನದಿಂದ ಮತ್ತು ಡಾಂಭಿಕತನದಿಂದ ಯಾವನು ನಮಾಜವನ್ನು ಅರ್ಪಿಸುವನೋ, [ಜಕಾತರೂಪವಾಗಿ] ಕೊಡಲೇಬೇಕಾ ದಂಥ ವಸ್ತುಗಳನ್ನು ಯಾವನು ಕೊಡುವದಿಲ್ಲವೋ, ಅಂಥ ನಮಾಜಿಯು (ನಮಾಜ ಮಾಡುವವನು) ನಿಸ್ಸಂದೇಹವಾಗಿ [ಪರಲೋಕದಲ್ಲಿ] ಮಹಾ ದುರ್ಗತಿಗೆ ಈಡಾಗುವನು !

## —ಸೂರೆ ಕೌಸರ್—

ಬಿಸ್ಮಿಲ್ಲಾ ಹಿರ್ರಹಿಮಾ ನಿರ್ರಹೀಮ್

"ಇನ್ನಾ.... ಅಅತೊಯ್ನಾ ಕಲ್‌ಕೌಸರ್ + ಫ ಸೊಲ್ಲಿ ಲಿರಬ್ಬಿಕ ವನ್‌ಹರ್ + ಇನ್ನ ಷಾ, ನಿಅಕ ಹುವಲ್-ಅಬ್ತರ್ +"

-ಅನುವಾದ-

[ಎಲೋ ನನ್ನ ಪ್ರವಾದಿಯಾದ ಮಹಮ್ಮದನೇ, ನಿನ್ನ ಮನೋಬಯಕೆಯಂತೆ] ನಿಶ್ಚಯವಾಗಿಯೂ, ನಿನಗೆ ಪುಣ್ಯ-ಜಲ-ಭಾಂಡಾರವನ್ನು ಇತ್ತಿರು ವೆನು ! ಆದ್ದರಿಂದ [ನಿನ್ನ ಅನುಯಾಯಿಗಳ ಬಗ್ಗೆ ಚಿಂತನೆ ಮಾಡದೆ] ನಿನ್ನೊಡೆ ಯನಿಗಾಗಿ ಪ್ರಾರ್ಥನೆಗಳನ್ನು ಸಲ್ಲಿಸುತ್ತಿರು ಮತ್ತು ತ್ಯಾಗವನ್ನು ಮಾಡು ತ್ತಿರು. [ಇದೋ ಕೇಳು!] ನಿಸ್ಸಂದೇಹವಾಗಿ ನಿನ್ನ ವೈರಿಗಳೆಲ್ಲ ವಿನಾಶ ವಾಗಲಿರುವರು !

## —ಸೂರೆ ಕಾಫಿರೂನ್—

ಬಿಸ್ಮಿಲ್ಲಾ ಹಿರ್ರಹಿಮಾ ನಿರ್ರಹೀಮ್

ಕುಲ್ ಯಾ.... ಅಯ್ಯುಹಲ್ ಕಾಫಿರೂನ; ಲಾ.... [illegible] ಮಾ ತಅಬುದೂನ್; ವ ಲಾ.... ಅಂತುಮ್ ಆಬಿದೂನ ಮಾ....

ಅಬಿಬುದ್ + ವ ಲಾ.... ಅನಾ ಆಬಿದುಮ್ಮಾ ಅಬತುಮ್; ವ ಲಾ.... ಅಂತುಮ್ ಆಬಿದೂನ್ ಮಾ.... ಅಬಿಬುದ್ + ಲಕುಮ್ ದೀನುಕುಮ್, ವಲಿಯದೀನ್ +"

-ಅನುವಾದ-

[ಎಲೋ ನನ್ನ ಪ್ರವಾದಿಯಾದ ಮುಹಮ್ಮದನೇ, ಆ ಕಾಫಿರ ಜನರಿಗೆ ಈ ರೀತಿ ಯಾಗಿ ಸ್ಪಷ್ಟವಾಗಿ] ಹೇಳು— "ಎಲೈ ಕಾಫಿರರೇ, ನೀವು ಪೂಜಿಸುವಂಥವ ರನ್ನು ನಾನು ಮಾತ್ರ ಪೂಜಿಸುವದಿಲ್ಲ; ಮತ್ತು ನಾನು ಭಜಿಸುತ್ತಿರುವ ಪರ ಮಾತ್ಮನನ್ನು ನೀವುಗಳು ಭಜಿಸುತ್ತಿಲ್ಲ; ! [ಮುಂದಾದರೂ ಸಹ] ನಿಮ್ಮ ಪೂಜಿತರನ್ನು ನಾನು ಪೂಜಿಸುವವನಲ್ಲ; ಮತ್ತು ನಾನು ಆರಾಧಿಸುತ್ತಿರವ ಪರಮಾತ್ಮನನ್ನು, ನೀವುಗಳು [ಕಡೆತನಕ] ಆರಾಧಿಸುವವರಲ್ಲ ! ಆದ್ದರಿಂದ [ವ್ಯರ್ಥ ವಾದಿಸಿ ಫಲವೇನು ?] ನಿಮ್ಮ ಧರ್ಮವು ನಿಮಗಾಗಿ ಇರಲಿ, ಮತ್ತು ನನ್ನದು ನನಗಾಗಿ."

## —ಸೂರೆ ನಸ್ರ—

ಬಿಸ್ಮಿಲ್ಲಾ ಹಿರ್ರಹಿಮಾ ನಿರ್ರಹೀಮ್

"ಇಜಾ ಜಾ....ಅ ನಸ್ರುಲ್ಲಾಹಿ ವಲ್‌ಫತ್‌ಹು; ವರಅಯ್‌ತನ್ನಾಸ ಯದ್‌ಖೂಲೂನ ಫೀ ದೀನಿಲ್ಲಾಹಿ ಅಫ್‌ವಾಜನ್‌; ಫಸಬ್ಬಿಹ್‌ ಬಿಹಮ್ದಿ ರಬ್ಬಿಕ, ವಸ್ತಫ್ಫಿರ್‌ + ಇನ್ನಹು ಕಾನ ತವ್ವಾಬಾ +"

-ಅನುವಾದ-

[ಎಲೋ ನನ್ನ ಪ್ರವಾದಿಯಾದ ಮುಹಮ್ಮದನೇ] ಪರಮಾತ್ಮನಿಂದ ಸಹಾ ಯವು ಬಂದು ನಿನಗೆ ಮುಟ್ಟಿದಾಗ; ಮತ್ತು [ಮಕ್ಕಾ ಪಟ್ಟಣದ] ವಿಜಯವು ನಿನಗೆ ದೊರೆತಾಗ; ಮತ್ತು ಪರಮಾತ್ಮನ ಧರ್ಮದಲ್ಲಿ ಜನಗಳು ಹಿಂಡು ಹಿಂಡಾಗಿ ಪ್ರವೇಶಿಸುವದನ್ನು ನೀನು ಕಂಡಾಗ; ನಿನ್ನೊಡೆಯನನ್ನು ಸ್ತುತಿ ಗಳಿಂದ ಜಪಿಸುತ್ತಿರು ಮತ್ತು ಅವನಲ್ಲಿ ಕ್ಷಮಾಯಾಚಿಸುತ್ತಿರು. ನಿಶ್ಚಯ ವಾಗಿಯೂ, ಪರಮಾತ್ಮನು ಮಹಾ ಕ್ಷಮಾಗುಣದವನಿದ್ದಾನೆ !

## —ಸೂರೆ ಲಹಬ್—

ಬಿಸ್ಮಿಲ್ಲಾ ಹಿರ್ರಹಿಮಾ ನಿರ್ರಹೀಮ್

"ತಬ್ಬತ್ ಯದಾ.... ಅಬೀ ಲಹಬಿಂವ್ವತಬ್ + ಮಾ.... ಅಗ್ನಾ ಅನ್‌ಹು ಮಾಲುಹು, ವ ಮಾ ಕಸಬ್ + ಸಯುಸ್ಲಾ ನಾರನ್‌ಜಾತ ಲಹಬಿಂವ್, ವ ಅಮ್ರು ಅತುಹ್; ಹಮ್ಮಾಲತಲ್-ಹತೊಬ್ + ಫೀ ಜೀದಿಹಾ ಹಬ್ಲುಮ್ಮಿಮ್ಮಸದ್ +"

-ಅನುವಾದ-

ಅಬೀಲಹಬನ ಎರಡೂ ಕೈಗಳು ನಾಶಹೊಂದಲಿ ! ಮತ್ತು ಅವನೂ ಸಹ ನಾಶವಾಗಿ ಹೋಗಲಿ ! ! ಅವನ ಐಶ್ವರ್ಯವೂ ಮತ್ತು ಅವನ ಸಂಪಾದನೆಯೂ ಅವನಿಗೆ ಉಪಯೋಗವಾಗಲಿಲ್ಲ. ಕ್ಷಿಪ್ರದಲ್ಲಿಯೇ, ಜ್ವಾಲಿಸುವ ಬೆಂಕಿಯಲ್ಲಿ ಅಬೀ ಲಹಬನು ನೂಕಲ್ಪಡುವನು—ತನ್ನ ಹೆಂಡತಿಯ ಸಹಿತಾಗಿ ! ತಲೆಯ ಮೇಲೆ ಕಟ್ಟಿಗೆಯನ್ನು ಹೊರುವ ಆ ಹಮ್ಮಾಲತಿ ! ! ಅವಳ ಕೊರಳಿನಲ್ಲಿ ಆಗ ತೊಗಟೆಯ ಒರಟು ಹಗ್ಗವು ಇದ್ದೀತು ! ! !

## —ಸೂರೆ ಅಖ್ಲಾಸ್—

ಬಿಸ್ಮಿಲ್ಲಾ ಹಿರ್ರಹಿಮಾ ನಿರ್ರಹೀಮ್

"ಕುಲ್ ಹುವಲ್ಲಾಹು ಅಹದ್ + ಅಲ್ಲಾಹುಸ್ಸೊಮದ್ + ಲಮ್ ಯಲಿದ್; ವ ಲಮ್ ಯೂಲದ್; ವ ಲಮ್ ಯಕುಲ್ಲಹು ಕುಫುವನ್ ಅಹದ್+"

-ಅನುವಾದ-

[ಎಲೋ ನನ್ನ ಪ್ರವಾದಿಯಾದ ಮುಹಮ್ಮದನೇ, ಆ ಜನರಿಗೆ ಹೀಗೆ] ಹೇಳು- "ಪರಮಾತ್ಮನು ಒಬ್ಬಾತನೇ ಇರುವನು; ಪರಮಾತ್ಮನು ನಿರಾವಲಂಬಿಯಾಗಿರುವನು; ಯಾರನ್ನೂ ಅವನು ಹಡೆದಿಲ್ಲ ಮತ್ತು ಯಾರಿಂದಲೂ ಅವನು ಹಡೆಯಲ್ಪಟ್ಟಿಲ್ಲ; ಮತ್ತು ಅವನಂಥವರು ಬೇರೆ ಮತ್ತಾರೂ ಇರುವದಿಲ್ಲ"

## —ಸೂರೆ ಫಲಕ್—

ಬಿಸ್ಮಿಲ್ಲಾ ಹಿರ್ರಹಿಮಾ ನಿರ್ರಹೀಮ್

"ಕುಲ್ ಅವೂಜು ಬಿ ರಬ್ಬಿಲ್-ಫಲಕಿ; ಮಿನ್ ಷರ್ರಿ ಮಾ ಖಲಕ; ವ ಮಿನ್ ಷರ್ರಿ ಗಾಸಿಕಿನ್ ಇಜಾ ವಕಬ; ವ ಮಿನ್ ಷರ್ರಿನ್ನಫ್ಫಾಸಾತಿ ಫಿಲ್-ವುಕದಿ; ವ ಮಿನ್ ಷರ್ರಿ ಹಾಸಿದಿನ್ ಇಜಾ ಹಸದ್ +"

-ಅನುವಾದ-

[ಎಲೋ ನನ್ನ ಪ್ರವಾದಿಯಾದ ಮುಹಮ್ಮದನೇ, ಈ ರೀತಿಯಾಗಿ] ಪಠಿಸು— "ಪರಮಾತ್ಮನು ಹುಟ್ಟಿಸಿದಂಥ ಸಕಲ ವಸ್ತುಗಳ ಅನಿಷ್ಟತೆಗಳಿಂದ, ಗಾಢಾಂಧಕಾರವು ಪಸರಿಸುವ ಸಮಯದಲ್ಲಿ ಅಂಧಕಾರದಿಂದ ಒದಗಬಹುದಾದ ಅನಿಷ್ಟತೆಗಳಿಂದ, ಗಂಟು ಗದಡಿಗಳಲ್ಲಿ ಮಂತ್ರವನ್ನೂದುವ ಮಾಟಗಾರತಿಯರ ಅನಿಷ್ಟತೆಗಳಿಂದ, ಮತ್ತು ಮತ್ಸರ ಪಡುವ ಕಾಲದಲ್ಲಿ ಮತ್ಸರ ಪಡುವವರ ಅನಿಷ್ಟತೆಗಳಿಂದ, ಉದಯಕಾಲದೊಡೆಯನ (ಪರಮಾತ್ಮನ) ರಕ್ಷಣೆಯನ್ನು ಕೋರುತ್ತೇನೆ."

## —ಸೂರೆ ನಾಸ್—

ಬಿಸ್ಮಿಲ್ಲಾ ಹಿರ್ರಹಿಮಾ ನಿರ್ರಹೀಮ್

"ಕುಲ್ ಅವೂಜು ಬಿ ರಬ್ಬಿನ್ನಾಸಿ; ಮಲಿಕಿನ್ನಾಸಿ; ಇಲಾಹಿನ್ನಾಸಿ; ಮಿನ್ ಷರ್ರಿಲ್ ವಸ್ವಾಸಿಲ್ ಖನ್ನಾಸ್; ಅಲ್ಲಜೀ ಯುವಸ್ವಿಸು ಫೀ ಸುದೂರಿನ್ನಾಸಿ; ಮಿನಲ್-ಜಿನ್ನತಿ ವನ್ನಾಸ್ +"

-ಅನುವಾದ-

[ಎಲೋ ನನ್ನ ಪ್ರವಾದಿಯಾದ ಮುಹಮ್ಮದನೇ, ಈ ರೀತಿಯಾಗಿ] ಪಠಿಸು— "ಮಾನವರೇ ಇರಲಿ ಅಥವಾ ಜಿನ್ನಾತರೇ ಇರಲಿ, ಎಲ್ಲರ ಮನಗಳಲ್ಲಿಯೂ ಶೈತಾನನೇ ದುರ್ವಿಚಾರಗಳನ್ನು ಪ್ರಚೋದಿಸುವನಾದ್ದರಿಂದ, ದುರ್ವಿಚಾರ-ಪ್ರಚೋದಕನ ಅನಿಷ್ಟತೆಗಳಿಂದ ರಕ್ಷಿಸೆಂದು, ಮಾನವರೊಡೆಯನೂ ಮಾನವರರಸನೂ ಮಾನವಪೂಜಿತನೂ ಆದಂಥ ಪರಮಾತ್ಮನ ರಕ್ಷಣೆಯನ್ನು ಕೋರುತ್ತೇನೆ."

(೧)

**ಚರ್ಮ-ರೋಗಗಳ ವೈರಿ !**

# "ಕೋಬಾಯಿಲ್"

**ಇಸಬು, ತದ್ದು, ಗಜಕರ್ಣ** ಮೊದಲಾದ ತ್ವಚ-ರೋಗಗಳಿಗಾಗಿ "ಕೋಬಾಯಿಲ್"ವು ಅತ್ಯಂತ ಉಪಯುಕ್ತವಾದ ತೈಲವಿರುತ್ತದೆ. ಅದೆಷ್ಟೇ ಹಳೆಯ ರೋಗವಿದ್ದರೂ ಕೋಬಾಯಿಲ್‌ದ ಉಪಯೋಗದಿಂದ ಖಾತ್ರಿ ಯಿಂದ ನಿರ್ನಾಮವಾಗಿ ಹೋಗುತ್ತದೆ.

ಕೋಬಾಯಿಲ್‌ವನ್ನು ಮೂರು-ನಾಲ್ಕು ದಿವಸ ರೋಗವಿದ್ದ ಸ್ಥಳದ ಮೇಲೆ ಲೇಪಿಸುವದರಿಂದ ಚರ್ಮದ ಮೇಲ್ಪದರು ಉದರಿ ಹೋಗುತ್ತದೆ. ನಂತರ, ಕೋಬಾಯಿಲ್‌ದ ಲಗತ್ ದೊರೆಯುವ ಮುಲಾಮುವನ್ನು ಹಚ್ಚುವ ದರಿಂದ ಗಾಯವು ಒಂದೆರಡು ದಿನಗಳಲ್ಲಿ ವಾಸಿಯಾಗುತ್ತದೆ. ಮಾಹಿತಿ ಪತ್ರಿಕೆ ಔಷಧದ ಕೂಡ ಕಳಿಸಲ್ಪಡುವದು.

ಕೋಬಾಯಿಲ್‌ದ ಬಾಟ್ಲಿ ಮತ್ತು ಮುಲಾಮುದ ಡಬ್ಬಿ, ಎರಡಕ್ಕೂ ಕೂಡಿ ರೂ. ೧-೮-೦; ಅಂಚೆ ವೆಚ್ಚ ಬೇರೆ.

(೨)

# "ದನಗಳ ಮುಲಾಮು"

ಎತ್ತು, ಎಮ್ಮೆ, ಕೋಣ, ಆಕಳು ಮೊದಲಾದ ದನಗಳ ಗಾಯಗಳಿ ಗಾಗಿ ಈ ಮುಲಾಮು ಬಹಳೇ ಉಪಯುಕ್ತವಿದೆ. ಮಾಹಿತಿ ಪತ್ರಿಕೆ ಔಷಧದ ಲಗತ್ ಕಳಿಸಲ್ಪಡುತ್ತದೆ. ೧ ಡಬ್ಬಿಯ ಕಿಮ್ಮತ್ತು ರೂ. ೧-೦-೦ ಅಂಚೆ ವೆಚ್ಚ ಬೇರೆ.